# ವಿರಾಗಿಣಿ

## ( ಅಕ್ಕಮಹಾದೇವಿ )

ಕಂಠಿ ಸಿದ್ಧಲಿಂಗಪ್ಪನವರಿಂದ



೧೯೪೧

THE BAGALKOT PRINTING WORKS,
BAGALKOT.

# ಮುನ್ನುಡಿ

ಮುನ್ನುಡಿಯನ್ನು ಬರೆಯಲು ನನಗಿರುವ ಅಧಿಕಾರದ ವಿಚಾರವಾಗಿ ನನಗಿಂತ ಗ್ರಂಥಕರ್ತರಿಗೇ ಹೆಚ್ಚು ಗೊತ್ತಿರಬೇಕು. ನನಗೆ ತೋರುವ ಕಾರಣಗಳೆಂದರೆ ಎರಡು ಮಾತ್ರ. ಒಂದನೆಯದು ಪ್ರಸ್ತುತ ನಾಟಕದಲ್ಲಿ ಅಡಕವಾಗಿರುವ ವಿಷಯದ ಬಗೆಗೆ ನನಗೆ ಆಸ್ಥೆಯಿದೆ. ಎರಡನೆಯದಾಗಿ ಗ್ರಂಥಕರ್ತರ ಹಾಗೂ ಅವರ ಲೇಖನವ್ಯವಸಾಯದ ಬಗೆಗೆ ನನಗೆ ಬಹು ದಿನಗಳಿಂದ ಪರಿಚಯವೂ ವಿಶ್ವಾಸವೂ ಇವೆ. ಹೀಗಿರುವಾಗ ಸ್ನೇಹಿತರಾದ ಶ್ರೀ. ಕಂಠಿ ಸಿದ್ಧಲಿಂಗಪ್ಪನವರು ವಿಶ್ವಾಸದಿಂದ ಕೆಲವು ಮೊದಲಮಾತುಗಳನ್ನು ಬರೆಯಬೇಕೆಂದು ಕೇಳಿದಾಗ ಎದುರು ಹೇಳಲಾರದೆ ಒಪ್ಪಿದ್ದೇನೆ. ಮುನ್ನುಡಿ ಬರೆವುದಕ್ಕೆ ನನಗಿರುವ ಅಧಿಕಾರದ ಮಾತು ಹೋಗಲಿ, ಶ್ರೀಯುತ ಕಂಠಿಯವರಿಗೆ ನಾಟಕ ಬರೆಯುವ ಸರಿಯಾದ ಅಧಿಕಾರವಿದೆಯೆಂದು ನಾನು ಸ್ಪಷ್ಟವಾಗಿ ತಿಳಿದುಕೊಂಡಿದ್ದೇನೆ. ಅವರ ಜೀವನದಲ್ಲಿ ಉಳಿದೆಲ್ಲ ವಿಷಯಗಳಿಗಿಂತ ನಾಟ್ಯದ ಬಗೆಗೆ ಅವರು ಹೆಚ್ಚಿನ ಸ್ಥಾನವನ್ನು ಕಲ್ಪಿಸಿಕೊಂಡಿದ್ದಾರೆ. ನಾಟಕಲೇಖನ, ಅಭಿನಯ, ನಾಟ್ಯಸಂಘಗಳ ಸಂಘಟನೆ ಇವುಗಳೇ ಅವರ ಜೀವನದ ಹವ್ಯಾಸಗಳು; ಉದ್ಯೋಗಗಳೂ ಅಹುದು. ಕಂಠಿ ಸಿದ್ಧಲಿಂಗಪ್ಪನವರಿಗೆ 'ನಾಟಕದ ಹುಚ್ಚು ಬಹಳ' ವೆಂಬ ಮಾತು ಸಾಮಾನ್ಯವಾಗಿ ಅವರ ಸ್ನೇಹಿತವರ್ಗದಲ್ಲಿ ಯಾವಾಗಲೂ ಕೇಳಬರುವುದುಂಟು. ಹೀಗೆಂದ ಮಾತ್ರಕ್ಕೆ ಅವರೊಬ್ಬ ನಟರೆಂದಾಗಲಿ, ನಾಟಕ ಕಂಪನಿಯ ಮ್ಯಾನೇಜರರೆಂದಾಗಲಿ ಅರ್ಥ ಮಾಡಿಕೊಳ್ಳಬೇಕಾಗಿಲ್ಲ. ನಿಜವಾಗಿ ನೋಡಿದರೆ ಅವರು ಜೀವನದಲ್ಲಿ ನಿರ್ದಿಷ್ಟವಾದುದೊಂದು ಉದ್ಯೋಗವನ್ನೇ ಕೈಕೊಂಡಿಲ್ಲ; ಕೈಕೊಳ್ಳುವ ಲಕ್ಷಣವೂ ಕಾಣಬರುವುದಿಲ್ಲ. ಕರ್ನಾಟಕ ರಂಗಭೂಮಿಯ ಪ್ರಗತಿಗಾಗಿ ದುಡಿಯಬೇಕೆಂಬ ಆಕಾಂಕ್ಷೆ ಅವರದು. ಅವರ ಗುರಿಯಲ್ಲಿ ವ್ಯಾವಹಾರಿಕ ಕಾರ್ಯಚತುರತೆಗಿಂತ ಆದರ್ಶತೆ ಅಸ್ಪಷ್ಟತೆ ಹೆಚ್ಚೆಂದು ನಾನು ಹೇಳಿದರೆ ಈ ಮಾತಿನಲ್ಲಿ ಕಹಿ

ಹೆಚ್ಚಿದೆಯೆಂದು ಯಾರೂ ತಿಳಿಯಲಿಕ್ಕಿಲ್ಲವೆಂದು ನಾನು ತಿಳಿಯುತ್ತೇನೆ. ಉತ್ತರ ಕರ್ನಾಟಕದಲ್ಲಿ ಅವರ ಪರಿಚಯವಿರದ ನಾಟಕ ಕಂಪನಿಗಳು ಯಾವುವೂ ಇದ್ದಂತಿಲ್ಲ. ಆದರೆ ಎಲ್ಲಿಯೂ ಅವರ ಹೆಸರು ದಪ್ಪಕ್ಷರಗಳಲ್ಲಿ ಬಂದಂತಿಲ್ಲ. ಅವರನ್ನು ನಾಟಕ ಕಂಪನಿಯ ಮಾಲಕರು, ರಂಗತಾಲೀಮಿನ ಮಾಸ್ತರರು, ಹ್ಯಾಂಡಬಿಲ್ಲಿನ ಮೇಲೆ ಸಹಿ ಮಾಡುವ ಮ್ಯಾನೇಜರರು, ನಾಟಕ ಬರೆದು ಕೊಡುವ 'ಕವಿಗಳು' ಎಂದು ಕರೆವುದಕ್ಕಿಂತ ನಾಟ್ಯಪ್ರೇಮಿ ಗಳೆಂದು ಕರೆದರೆ ಹೆಚ್ಚು ಯಥಾರ್ಥವಾದೀತು. ಪ್ರಗತಿಪರ ವಿಚಾರದ ಇವರಿಗೆ ಕರ್ನಾಟಕದ ಮುನ್ನಡೆಯಲ್ಲಿ ಆಸ್ಥೆ ಆತುರಗಳಿವೆ. ಆಸ್ಥೆ ಕಡಮೆ; ಆತುರ ಹೆಚ್ಚು, ಎಂದು ಇವರ ವಿಚಾರವಾಗಿ ಹೇಳಲು ಬರುವಂತಿಲ್ಲ. ಬೇಕಿದ್ದರೆ ಆಸ್ಥೆಯ ಹುಚ್ಚಿನಲ್ಲಿ ಆತುರವನ್ನು ಮರೆತೇ ಬಿಡುವ ಜಾತಿಯೆಂದು ಹೇಳಬಹುದು. ಲೇಖನ ವ್ಯವಸಾಯದಲ್ಲಿನ ಅವರ ಆಸ್ಥೆ ಸುಮಾರು ೧೫ ವರುಷಗಳ ಹಿಂದೆಯೇ ಕಂಡುಬಂದಿದೆ. ೧೯೨೭ನೆಯ ಇಸವಿಯಲ್ಲಿ ಅವರ 'ದಿವ್ಯಪ್ರೇಮ' ನಾಟಕಕ್ಕೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪಾರಿತೋಷಕ ದೊರೆಯಿತು. ಆದರೆ ಅವರ ಬರೆಹ ಪುಸ್ತಕದ ಗಾತ್ರದಲ್ಲಿ ಪ್ರಕಟವಾಗುತ್ತಿರುವುದು ೧೯೪೧ರಲ್ಲಿಯೇ. ಕಲಾಪ್ರೇಮದ ಆದರ್ಶ, ರಂಗಭೂಮಿಯ ವಿಪುಲ ಪರಿಚಯ, ಲೇಖನ ವ್ಯವಸಾಯದಲ್ಲಿ ಆಸ್ಥೆಯುಳ್ಳ ಈ ಲೇಖಕರ ಪ್ರಸ್ತುತ ನಾಟಕವು ಕನ್ನಡ ವಾಚಕರನ್ನು ಆಕರ್ಷಿಸುವು ದೆಂದು ನಾನು ತಿಳಿಯುತ್ತೇನೆ.

೨

ವಿರಾಗಿಣಿ ಅಕ್ಕಮಹಾದೇವಿಯ ಜೀವನವು ಕಾವ್ಯಮಯವಾಗಿದೆ. ಅವಳ ಕಾವ್ಯಮಯ ಜೀವನವನ್ನು ಹರಿಹರನು ತನ್ನ ರಗಳೆಯಲ್ಲಿ, ರಾಚಪ್ಪನು ಅಕ್ಕನ ಸಾಂಗತ್ಯದಲ್ಲಿ, ಚೆನ್ನಬಸವಾಂಕನು ಅಕ್ಕನ ಪುರಾಣ ದಲ್ಲಿ ಹೃದಯಂಗಮವಾಗಿ ಬಣ್ಣಿಸಿದ್ದಾರೆ. ಇದಲ್ಲದೆ ಚಾಮರಸನ ಪ್ರಭು-ಲಿಂಗಲೀಲೆ, ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣ, ಹಾಗೂ ಇನ್ನೂ ಕೆಲವು ವೀರಶೈವ ಪುರಾಣಗಳಲ್ಲಿ ಅಕ್ಕನ ಜೀವನದ ಕಾವ್ಯಮಯ ಬಣ್ಣನೆ ಯಿದೆ. ಅಕ್ಕನ ಆಧ್ಯಾತ್ಮಿಕ ಜೀವನವನ್ನು ಶೂನ್ಯ ಸಂಪಾದನೆಕಾರರು

ಮುಸಂಬುಗುವ ದೃಶ್ಯದ ರೀತಿಯಲ್ಲಿ ಚಿತ್ರಿಸಿದ್ದಾರೆ. ಅಂತು ಹದಿಮೂರ-ನೆಯ ಶತಮಾನದ ಆರಂಭದಿಂದ ಹದಿನಾರನೆಯ ಶತಮಾನದ ವರೆಗಿನ ಕಾವ್ಯಗಳಲ್ಲಿ ಅಕ್ಕನ ವ್ಯಕ್ತಿತ್ವ ಕೀರ್ತಿಸಲ್ಪಟ್ಟಿದೆ. ಇಪ್ಪತ್ತನೆಯ ಶತಮಾನ ದಲ್ಲಿ ಅಕ್ಕನ ಗುಣಗಾನ, ಅಭ್ಯಾಸ ಇನ್ನೂ ಹೆಚ್ಚಿವೆ. ರಾವಬಹಾದ್ದೂರ ಹಳಕಟ್ಟಿಯವರು ಅಕ್ಕನ ವಚನಗಳನ್ನು ಆರಿಸಿ ಚಿಕ್ಕ ಹೊತ್ತಿಗೆಯಾಗಿ ಪ್ರಕಟಿಸಿದರು. ಅಕ್ಕನ ಜೀವನದ ಅಭ್ಯಾಸಕ್ಕೆ ಅದೊಂದು ಸಾಧನವಾಗಿ ಪರಿಣಮಿಸಿತು. ಅಕ್ಕನ ಬಗೆಗೆ ಅನೇಕ ಲೇಖನಗಳು ಪತ್ರಿಕೆಗಳಲ್ಲಿ ಬಂದಿವೆ; ಬರುತ್ತಲಿವೆ. ಉಪನ್ಯಾಸಗಳಿಗೂ ಕಡಿಮೆಯಿಲ್ಲ. 'ಶಿವಾನುಭವ' ಪತ್ರಿಕೆಯ ಅನೇಕ ಸಂಚಿಕೆಗಳಲ್ಲಿ ಅಕ್ಕನ ಬಗೆಗೆ ನಾವು ಅನೇಕ ಬರೆಹ ಗಳನ್ನು ಕಾಣುತ್ತೇವೆ. ಬೇರೆ ಪತ್ರಿಕೆಗಳಲ್ಲಿಯೂ ಲೇಖನಗಳು ಬಂದಿವೆ. ಪಂಡಿತ ಮಹಾದೇವಸ್ವಾಮಿಗಳ ಸ್ಫೂರ್ತಿಯಿಂದ ಬಂದ ಬರೆಹಗಳಲ್ಲದೆ ಸರಸ್ವತಿ ಸಂಪಾದಿಕೆಯ ಲೇಖನ, ಬಿ. ಪುಟ್ಟಯ್ಯನವರು, ಪ್ರೊ. ಕುಂದಣ-ಗಾರರು, ಅ. ನ. ಕೃಷ್ಣರಾಯರು, ಅಡನೂರ ಮಠದ ಸ್ವಾಮಿಗಳು, ಸಾ. ಹ. ಶಿವಮೂರ್ತಿ ಸ್ವಾಮಿಗಳು ಬರೆದ ಲೇಖನಗಳೂ ಅಕ್ಕನ ಜೀವನದ ಸಮಸ್ಯೆ, ತತ್ವಗಳ ಅಭ್ಯಾಸಕ್ಕೆ ಅವಕಾಶ ಕಲ್ಪಿಸಿಕೊಟ್ಟಿವೆ. ಅಕ್ಕನ ಜೀವನ ರಹಸ್ಯವನ್ನು ಕುರಿತು ಹೇಳಬೇಕೆಂದಿರುವ ಕೆಲವು ಮಾತುಗಳನ್ನು ನಾನು ಶಿವಾನುಭವ ಪತ್ರಿಕೆಯ ೧೨ನೆಯ ವರುಷದ ೩ನೆಯ ಸಂಚಿಕೆಯಲ್ಲಿ ಒಂದು ಲೇಖನದಲ್ಲಿ ಬರೆದಿದ್ದೇನೆ. ಅಕ್ಕನ ವಿಚಾರವಾಗಿ ಅನೇಕವಾಗಿ ಬಂದ ಎಲ್ಲ ಲೇಖನಗಳ ನಿರ್ದೇಶ ಇಲ್ಲಿ ಸಾಧ್ಯವಿಲ್ಲ. ಇನ್ನು ಹೊಸಗನ್ನಡ ಗ್ರಂಥಗಳ ಕಡೆಗೆ ತಿರುಗಿದಾಗ ಮೂರು ಪುಸ್ತಕಗಳು ನಮ್ಮ ಗಮನವನ್ನು ಎಳೆಯ ಬಹುದು. ಅಕ್ಕನ ಜೀವನ ಚರಿತ್ರೆಯ ಬಗೆಗೆ ಅನೇಕ ವಿಷಯಗಳನ್ನು ಸಂಗ್ರಹಿಸಿ ಪ್ರೊ. ಕುಂದಣಗಾರರು 'ಮಹಾದೇವಿಯಕ್ಕ' ಎಂಬ ಚರಿತ್ರ ಗ್ರಂಥವನ್ನು ಬರೆದಿದ್ದಾರೆ. ಅಕ್ಕನ ವಚನಗಳನ್ನೆ ಹಿನ್ನೆಲವಾಗಿಟ್ಟುಕೊಂಡು ಪ್ರೊ. ಮುಗಳಿಯವರು 'ಅಕ್ಕಮಹಾದೇವಿ' ಯೆಂಬ ನಾಟಕವನ್ನು ಬರೆ ದಿದ್ದಾರೆ. ಶ್ರೀ ನಿಡುಮಾಮಿಡಿ ಮಠದ ಸ್ವಾಮಿಗಳು "ಅಕ್ಕನ ಬಾಳು" ಎಂಬ ಹೊತ್ತಿಗೆಯಲ್ಲಿ ಆಧ್ಯಾತ್ಮಿಕ ಜೀವನವನ್ನು ಸ್ಫೂರ್ತಿದಾಯಕ

ರೀತಿಯಲ್ಲಿ ಚಿತ್ರಿಸಿದ್ದಾರೆ. ಕೆಲವು ಕಂಪನಿಯವರು ಅಭಿನಯಿಸುವ ಅಕ್ಕ ಮಹಾದೇವಿಯ ಬಗೆಗಿರುವ ನಾಟಕಗಳು ಇನ್ನೂ ಪ್ರಕಟವಾಗಿಲ್ಲ. ಅಲ್ಲಲ್ಲಿ ಕೆಲವು ಅಭಿನಯಕ್ಕಾಗಿ ಬರೆದ ದೃಶ್ಯಗಳೂ ಬಂದಿರಬೇಕು. ಇದನ್ನೆಲ್ಲ ಮನದಂದು ಬರಲಿರುವ ಕವಿಯೋ, ಬೇಜಾರುಪಟ್ಟುಕೊಂಡ ವಿಮರ್ಶ-ಕನೋ "ಅಕ್ಕನ ಚರಿತೆಯ ಭಾರದಲಿ ತಿಣುಕಿದನು ಫಣಿರಾಯಾ" ಎಂದುಸುರಬಹುದೇನೋ ಎಂದೆನಿಸುತ್ತದೆ. ಆದರೆ ಪ್ರಸ್ತುತ ಗ್ರಂಥದ ಲೇಖಕರು ಮಾತ್ರ ಹಾಗೆ ಭಾವಿಸಿಲ್ಲ. ಅಕ್ಕನ ಚರಿತ್ರ ಲೇಖನದಲ್ಲಿ ಕಾಲಿಡಲು ಇನ್ನೂ 'ತೆರಪು' ಇದೆಯೆಂದು ನಂಬಿ ಅವರು ಈ ನಾಟಕ ವನ್ನು ಬರೆದಿದ್ದಾರೆ. ಅವರ ನಂಬುಗೆ ಸರಿಯಾದುದೆಂದು ನಾನೂ ನಂಬು ತ್ತೇನೆ. ಅವರ ಗ್ರಂಥಕ್ಕೆ ಮುನ್ನುಡಿ ಬರೆಯುತ್ತಿರುವೆನೆಂದು ನಾನು ಹಾಗೆ ಹೇಳುತ್ತಿಲ್ಲ. ಆದರೆ ಹಾಗೆ ನಾನು ನಂಬಿರುವುದರಿಂದಲೇ ಮುನ್ನುಡಿ ಬರೆಯಲು ಒಪ್ಪಿದ್ದೇನೆ.

೨

'ಫಣಿರಾಯ' ನನ್ನಲ್ಲದಿದ್ದರೂ ನಾಕಷ್ಟು ತಾಳ್ಮೆಯಿಲ್ಲದ ವಾಚಕ-ರನ್ನು ತಿಣುಕಿಸುವಷ್ಟು ಸಾಹಿತ್ಯ ಅಕ್ಕನ ಬಗೆಗೆ ಬಂದಿರುವಾಗ ಬರಲಿರುವ ಸಾಹಿತ್ಯ ಕೃತಿಗಳು ತಮ್ಮ ಸಾರ್ಥಕತೆಯನ್ನು ಸಿದ್ಧಗೊಳಿಸಬೇಕಾಗುತ್ತಿದೆ ಯೆಂಬುದು ನಿಜ. ಹೊಸಗನ್ನಡ ಗ್ರಂಥಗಳ ಮಟ್ಟಿಗೆ ಹೇಳಬಹುದಾದರೆ ಅಕ್ಕನ ಬಗೆಗೆ ಪ್ರಕಟವಾಗಿರುವ ನಾಟಕ ಒಂದೇ ಒಂದು (ಕೆಲವು ಚಿಕ್ಕ ದೃಶ್ಯಗಳೂ ಬಂದಿರಬೇಕು). ರಂಗಭೂಮಿಯ ಪರಿಚಯ, ಅನುಭವ ಪಡೆದ ಶ್ರೀಯುತ ಸಿದ್ಧಲಿಂಗಪ್ಪನವರು ಸ್ವಾಭಾವಿಕವಾಗಿಯೇ ಅಕ್ಕನ ಅದ್ಭುತ ರಮ್ಯಜೀವನದಲ್ಲಿ ನಾಟಕೀಯತೆಯನ್ನು ಗುರುತಿಸಿದ್ದಾರೆ. ಪ್ರೊ. ಮುಗಳಿಯವರು "ಅಕ್ಕಮಹಾದೇವಿ" ನಾಟಕವನ್ನು ಅಕ್ಕನ ವಚನ ಗಳಿಗೆ ಒಂದು ಚೌಕಟ್ಟನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಶ್ರೀ. ಕಂಠಿ ಯವರು ತಮ್ಮ ನಾಟಕದಲ್ಲಿ ಹೊಸದೊಂದು ದೃಷ್ಟಿಯನ್ನಿಟ್ಟುಕೊಂಡಿ ದ್ದಾರೆ. ಅಲ್ಲದೆ ಅವರು ತಮ್ಮ ನಾಟಕದ ವಸ್ತುವಿಗಾಗಿ ಯಾವ ಒಬ್ಬ ಗ್ರಂಥಕಾರನಿಗೂ ಋಣಿಯಾದಂತಿಲ್ಲ. ಈಗ ಪ್ರಚಲಿತವಿರುವ ಅವು-ದೊಂದು ಹೇಳಿಕೆ (version) ಯನ್ನು ಅವರು ಅನುಸರಿಸಿದಂತಿಲ್ಲ.

ಕಲಾವಿದನಿಗೆ ಸಹಜವಾಗಿರುವ ಸ್ವಾತಂತ್ರ್ಯ ವಹಿಸಿ ಅವರು ಈ ನಾಟಕ ದಲ್ಲಿ ತಮ್ಮ ಕಲ್ಪನೆಯನ್ನು ಹರಿಯಿಸಿದ್ದಾರೆ. ಅಕ್ಕನ ಜೀವನದ ವಿವರ ಗಳನ್ನು ಸಿದ್ಧಗೊಳಿಸಲು ಸಂಶೋಧಕರಿಗೇ ಸಾಧ್ಯವಿಲ್ಲದಿರುವಾಗ ಅಕ್ಕನ ಜೀವನ ವಿಕಾಸವು ಹೀಗಿರಬೇಕೆಂದು ಅವರು ಕಲ್ಪಿಸಿದುದನ್ನು ಯಾರೂ ಅಲ್ಲಗಳೆಯಬೇಕಾಗಿಲ್ಲವೆಂದು ಶ್ರೀ. ಕಂಠಿಯವರು ಸಮಾಧಾನ ಹೇಳು ತ್ತಾರೆ. ಆಧ್ಯಾತ್ಮಿಕ ಜೀವನ ವಿಕಾಸದಲ್ಲಿ ಗುರುವಿನ ಮಹತ್ವವನ್ನು ಸರಿ ಯಾಗಿಯೇ ಅರಿತ ಈ ಲೇಖಕರು 'ಜಗದಾರಾಧ್ಯ'ನೆಂಬ ಹೆಸರಿನ ಗುರು ವೊಬ್ಬನನ್ನು ಇಲ್ಲಿ ಕಲ್ಪಿಸಿದ್ದಾರೆ. ಪ್ರಭುದೇವನ ವಚನಗಳನ್ನು ಅವನ ಬಾಯಿಯಿಂದ ಹೇಳಿಸಿದ್ದಾರೆ. ಅಕ್ಕನಿಗೆ ಜಗದಾರಾಧ್ಯನೆಂಬ ಗುರುವಿದ್ದನೇ? ಎಂಬ ಪ್ರಶ್ನೆಗೆ ಶ್ರೀ. ಕಂಠಿಯವರು ಅಕ್ಕನಿಗೆ ಒಬ್ಬ ಗುರುವಿದ್ದುದು ನಿಜ, ಅವನಿಗೇ ನಾನು ಜಗದಾರಾಧ್ಯನೆಂದು ಹೆಸರು ಕೊಟ್ಟಿದ್ದೇನೆಂದು ಹೇಳು ತ್ತಾರೆ. ನಿಜವಾದ ಹೆಸರನ್ನು ಹಿಂದೆ ಉಳಿಯಿಸಿ ಹೊಸ ಕಾವ್ಯನಾಮ, ತಾರಕನಾಮ, ಸಲಿಗೆಯ ಹೆಸರುಗಳನ್ನು ಮುಂದೆ ಮಾಡುತ್ತಿರುವ ಈ ಕಾಲದಲ್ಲಿ ಅಕ್ಕನ ಗುರುವಿಗೆ 'ಜಗದಾರಾಧ್ಯ' ಎಂಬ ಸುಂದರ ಅರ್ಥಪೂರ್ಣ ಹೆಸರಿಟ್ಟಿದ್ದಾರೆ ಲೇಖಕರು. ತಮ್ಮ ಶಿಶುವಿಗೆ ತಮ್ಮಿಷ್ಟದಂತೆ ಹೆಸರಿಡುವ ಸ್ವಾತಂತ್ರ್ಯವನ್ನು ಯಾರೂ ಅಲ್ಲಗಳೆಯಬೇಕಾಗಿಲ್ಲವಷ್ಟೇ. ಈ ಕೃತಿಗೆ ಅಕ್ಕನ ಆಧ್ಯಾತ್ಮಿಕ ಜೀವನವು ಜೀವಾಳವಾದರೆ ಜಗದಾರಾಧ್ಯನು ಆ ಜೀವಾಳದ ಸೂತ್ರವಾಗಿದ್ದಾನೆ. ಈ ನಾಟಕದಲ್ಲಿ ಅವನ ಪ್ರವೇಶ, ಮಾತು ಹೆಚ್ಚಾಗಿ ಬಂದಿಲ್ಲ. ಆದರೂ ಕೆಲವು ಕಿಡಿನುಡಿಗಳಿಂದ ಆತನು ಅಕ್ಕನ ಜೀವನ ಪ್ರವಾಹವನ್ನೇ ಕೊಚ್ಚಿದ್ದಾನೆ. ಅಲೆಯಂಚೆಯ ನುಡಿಗಳಂತೆ ಬಂದ ಆತನ ವಚನಗಡಣವು ಅಕ್ಕನ ಜೀವನದ ಜ್ಯೋತಿಯಾಗಿದೆ; ದಿಕ್ಸೂಚಿಯಾಗಿದೆ. ಓದುಗರು ಅದನ್ನು ಸರಿಯಾಗಿ ಗುರುತಿಸಬಹುದೋ ಇಲ್ಲವೋ ನಾನರಿಯೆ. ಈ ಮಾತನ್ನು ನಾನು ಲೇಖಕರಿಗೂ ಸೂಚಿಸದೆ ಇಲ್ಲ. ಆಗ ಅವರು ಪರಿಪಕ್ವವಾದ ಅಕ್ಕನ ಜೀವನನೌಕೆಗೆ ಜಗದಾರಾಧ್ಯನ ದೊಂದು ಕಿಡಿನುಡಿಯು ದಿಕ್ಸೂಚಿಯಾಗದೆ ಇರದು ಎಂದು ನಾನು ತಿಳಿ ದಿದೇನೆ, ಎಂದರು. ಅದನ್ನು ನಾವೂ ಒಪ್ಪಬೇಕಾಗಿದೆ. ಭೋಂಕನೆ

ಬಂದ ಒಂದು ಜ್ಯೋತಿ ಪರಿಪಕ್ವ ಮನಸ್ಸಿನ ವ್ಯಕ್ತಿಯ ಜೀವನ ಪಥವನ್ನು ತಿರುಗಿಸದೆ ಇರಲಾರದು. ಸಾಮಾನ್ಯ ಜೀವಿಯಾದರೆ ಲಂಬಾಯಮಾನವಾದ ಸಂಭಾಷಣೆಯು ವಾದ ಹೂಡಿ ಮನವೊಪ್ಪಿಸಬೇಕಾದೀತು. ಅಕ್ಕನಿಗೆ ಅದು ಆವಶ್ಯಕವಿರಲಿಲ್ಲ. ಅಂತೆಯೇ ಜಗದಾರಾಧ್ಯನ ಮಾತು ನಾಟಕದಲ್ಲಿ ಹೆಚ್ಚಾಗಿ ಬಂದಿಲ್ಲ. ಆತನು ಸಂಭಾಷಣೆಯನ್ನೇ ನಡೆಯಿಸಿದಂತಿಲ್ಲ. ಆತನ ಹಾಡು ಅಲೆಯಂಚೆಯ ಮೂಲಕ ತೂರಿಬಂದು ಅಕ್ಕನ ಕಿವಿಗಳನ್ನು ಸೇರುವುದು ಮಾತ್ರ. ಫ್ರಾನ್ಸಿನ ಸೇಂಟ್ ಜೋನಳು ಚರ್ಚುಗಳಲ್ಲಿಯ ಗಂಟೆಗಳ ನಿನಾದ ಕೇಳಿ ತನ್ನ ಜೀವನದ ಗುರಿಯನ್ನು ಕಂಡುಕೊಂಡಳಂತೆ. ಮಹಾತ್ಮಾ ಗಾಂಧಿಯವರು ಅವುವೋ ಧ್ವನಿಗಳನ್ನು ಕೇಳಿ ತಮ್ಮ ಜೀವನ ನೌಕೆಯ ಮಾರ್ಗವನ್ನು ನಿಶ್ಚಯಿಸುವರಂತೆ. ಭಾವನಾತ್ಮಕರು ಈ ಮಾತುಗಳನ್ನು ನಂಬಿ ಒಪ್ಪುತ್ತಾರೆ. ಬರ್ನಾರ್ಡ ಶಾನಂತಹರು ಅದೊಂದು ಉತ್ಕಟವಾದ ತಲ್ಲೀನತೆಯ ಪರಿಣಾಮವೆಂದು ಬುದ್ಧಿಪ್ರಧಾನ ಜನರಿಗೆ ಸಮಾಧಾನ ಹೇಳುತ್ತಾರೆ. ಆದುದರಿಂದ ಭಾವನಾಪ್ರಧಾನರೂ ಬುದ್ಧಿಪ್ರಧಾನರೂ ಜಗದಾರಾಧ್ಯನ ಮಿಂಚಿನಂತೆ ಸುಳಿದು ಹೋದ ನುಡಿಗಳು ಅಕ್ಕನಿಗೆ ಮಾರ್ಗದರ್ಶಿಯಾಗಲು ಕಾರಣವಾದವೆಂದು ಒಪ್ಪಬೇಕಾಗುತ್ತದೆ.

ಅಕ್ಕನಿಗೊಬ್ಬ ಗುರುವನ್ನು ಕಲ್ಪಿಸಿದ ಲೇಖಕರು ಅಕ್ಕನ ತಾಯಿಗೆ ಒಬ್ಬ ಅಳಿಯನನ್ನು ಕಲ್ಪಿಸಿದ್ದಾರೆ. ಪೆದ್ದ ಅಳಿಯ, ಮುಗ್ಧ ಅತ್ತೆ, ಅತ್ತೆಯ ಚತುರ ಮಗಳು—ಎಂಬ ಪಾತ್ರಗಳ ತ್ರಿಕೋಣ ಸಾಮಾನ್ಯವಾಗಿ ಮನೋರಂಜಕವಾಗಿರುವುದುಂಟು. ಈ ಮನೋರಂಜಕ ಪಾತ್ರಗಳ ತ್ರಿಕೋಣವನ್ನು ಗೋಲ್ಡ್‌ಸ್ಮಿಥನು ತನ್ನ 'She Stoops to Conquer' ಎಂಬ ನಾಟಕದಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. ಆ ನಾಟಕದ ಮೂರನೆಯ ಅಂಕಿನಲ್ಲಿ Miss Neville ಯು ತನ್ನ ರತ್ನಗಳನ್ನು ತಿರುಗಿ ಕೊಡ-ಬೇಕೆಂದು ಕೇಳಿದಾಗ Mrs. Hardcastle ಈಕೆಯು ಅವುಗಳು ಕಳೆದುಹೋದುವೆಂದು ಹೇಳುವ ಸನ್ನಿವೇಶ ಬರುತ್ತದೆ. ಮುಂದೆ ನಿಜವಾಗಿಯೇ ಅವುಗಳು ಇಟ್ಟ ಸ್ಥಳದಲ್ಲಿ ಇಲ್ಲದಿರುವುದನ್ನು ಕಂಡು Mrs. Hardcastle ಈಕೆಯು ಬೆಪ್ಪಾಗುತ್ತಾಳೆ; ದುಃಖಕ್ಕೀಡಾಗುತ್ತಾಳೆ. ಆ

ಸಂದರ್ಭದಲ್ಲಿ Tony Lumpkinನು ನಡೆಯಿಸುವ ಚೇಷ್ಟೆಯ ಮಾತುಗಳನ್ನು Mrs. Hardcastleಳ ಗಂಭೀರತೆಯೊಡನೆ ಕೂಡಿದ ಸಂಭಾಷಣೆಯನ್ನು ನಾಟಕಕಾರನು ಸುಂದರವಾಗಿ ಚಿತ್ರಿಸಿದ್ದಾನೆ. ಮುಂದೆ ಐದನೆಯ ಅಂಕದಲ್ಲಿ ತನ್ನ ಅತ್ತೆಯನ್ನು ಕತ್ತಲೆಯಲ್ಲಿ ಕರೆದುಕೊಂಡು ಹೋಗಿ ಹಾದಿ ತಪ್ಪಿಸಿ, ಊರ ಮುಂದೆಯೇ ಸುತ್ತಿಸಿ, ಕತ್ತಲೆಯಲ್ಲಿ ಆಕೆಯನ್ನು ಬೆದರಿಸುವ ಮಾತುಗಾರಿಕೆಯಲ್ಲಿಯೂ ಜಾಣ್ಮೆಯಿದೆ. ಶ್ರೀ. ಕಂಠಿಯವರ ನಾಟಕದಲ್ಲಿ ಕುಮಾರನು Tony Lumpkinನನ್ನೂ ನಿರ್ಮಲೆ Mrs. Hardcastleಳನ್ನೂ ಕೆಲಮಟ್ಟಿಗೆ ಹೋಲುವಂತಿದೆ. ಆದರೆ ಸನ್ನಿವೇಶಗಳು ಮಾತ್ರ ಬೇರೆಯಾಗಿವೆ. ಅಕ್ಕಮಹಾದೇವಿ ಮನೆಯಿಂದ ಹೊರಟು ಹೋಗಿರುವಾಗ ಒಂದನೆಯ ಅಂಕದಲ್ಲಿ ಕುಮಾರನು ತನ್ನ ಅತ್ತೆಯನ್ನು ತನ್ನ ಪೆದ್ದತನದಿಂದ ಮತ್ತಿಷ್ಟು ದುಃಖಕ್ಕೀಡು ಮಾಡುತ್ತಾನೆ. ಮುಂದೆ ಅದೇ ಅಂಕದ ನಾಲ್ಕನೆಯ ಪ್ರವೇಶದಲ್ಲಿ ಮಹಾದೇವಿಯನ್ನು ಹುಡುಕಲು ಕುಮಾರ, ನಿರ್ಮಲಸೆಟ್ಟಿಯರು ಹೋದಾಗ ಕುಮಾರನು ತನ್ನ ಮಾವನ ಗೋಳು ಹುಯ್ಯುತ್ತಾನೆ. ಆ ಸಂಭಾಷಣೆಯೂ ಮಾರ್ಮಿಕವಾಗಿದೆ. ಆದರೆ ಕುಮಾರನು Tony Lumpkinನ ಹಾಗೆ ವಿನೋದಗಾರನಲ್ಲ; ಅಲ್ಲದೆ ಕುಮಾರನಿಗೆ ಅಕ್ಕಮಹಾದೇವಿಯನ್ನು ಮದುವೆಯಾಗುವ ಹಂಬಲ. Tony Lumpkinನಿಗಾದರೋ Miss Neville ಬೇಡವಾದ ಹೆಣ್ಣು. ಅತ್ತೆಯೇ ಬಲವಂತದಿಂದ ಆಕೆಯನ್ನು ಅವನ ಕೊರಳಿಗೆ ಕಟ್ಟಬೇಕೆನ್ನುತ್ತಾಳೆ. ಕಥಾಸಂದರ್ಭ, ಪಾತ್ರಸ್ವರೂಪ ಕೆಲಮಟ್ಟಿಗೆ ಬೇರೆಯಾಗಿದ್ದರೂ ಕುಮಾರನು ಬರುವ ಈ ಸನ್ನಿವೇಶಗಳಲ್ಲಿ ಮಾರ್ಮಿಕತೆ ಇಲ್ಲದೆ ಇಲ್ಲ. ಈ ಹೋಲಿಕೆಯು ಕೇವಲ ಆಕಸ್ಮಿಕವೇ ಸರಿ. ಏಕೆಂದರೆ ಶ್ರೀ. ಕಂಠಿಯುವರು ಈ ನಾಟಕವನ್ನು ಬರೆಯುವಾಗ ಗೋಲ್ಡ್‌ಸ್ಮಿಥನ ನಾಟಕದ—ಅಥವಾ ಅದರ ಭಾಷಾಂತರವಾದ ಪತಿವಶೀಕರಣದ—ಸನ್ನಿವೇಶಗಳು ತಮ್ಮ ಗಮನದಲ್ಲಿದ್ದಿರಲಿಲ್ಲವೆಂದು ಹೇಳಿದರು. ಇಂತಹ ಹೋಲಿಕೆಗಳಿಂದ, ಇದು ಅದರಿಂದ ತೆಗೆದುಕೊಂಡುದು, ಎಂಬ ಅಭಿಪ್ರಾಯಕ್ಕೆ ಎಡೆಕೊಡಕೂಡದೆಂದು ಈ ಮಾತನ್ನು ಇಲ್ಲಿ ಹೇಳುತ್ತಿರುವೆನಲ್ಲದೆ ಗೋಲ್ಡ್‌ಸ್ಮಿಥನ ಪ್ರತಿಭೆಯನ್ನು ಪ್ರಸ್ತುತ ನಾಟಕಕಾರರಲ್ಲಿ ಆರೋಪಿಸುವುದಕ್ಕಲ್ಲ.

ಇನ್ನೊಂದು ಇಂತಹದೇ ಹೋಲಿಕೆ ಈ ನಾಟಕದಲ್ಲಿ ನನಗೆ ಕಂಡು ಬಂದಿತು. ಈ ಸಂದರ್ಭದಲ್ಲಿಯೂ ಮೇಲಿನ ಅಭಿಪ್ರಾಯವನ್ನೇ ನಾನು ಸೂಚಿಸಬೇಕಾಗಿದೆ. ಶ್ರೀ. ಸಿ ಕೆ. ವೆಂಕಟರಾಮಯ್ಯನವರ 'ಮಂಡೋದರಿ' ನಾಟಕದ ಎರಡನೆಯ ಅಂಕದಲ್ಲಿ ಮೋಹವಶನಾದ ರಾವಣನು ಸೀತೆಯ ಮೇಲೆ ಬಲಾತ್ಕಾರ ಮಾಡಲು ಹವಣಿಸುವಾಗ ಮಂಡೋದರಿಯು ಅನಿರೀಕ್ಷಿತವಾಗಿ ಅವಳನ್ನುಳಿಸಲು ಮುಂದೆ ಬರುತ್ತಾಳೆ. ಪ್ರಸ್ತುತ ನಾಟಕದಲ್ಲಿ ಮಾನಿನಿಯು ಕೌಶಿಕನ ಬಲೆಯಿಂದ ಮಹಾದೇವಿಯನ್ನು ಉಳಿಸುತ್ತಾಳೆ. ಮೂರನೆಯ ಅಂಕದಲ್ಲಿ ಮಹಾದೇವಿಯ ತಾಯಿ-ತಂದೆಗಳನ್ನು ಸೆರೆಯಿಂದ ಬಿಡಿಸಲು ಬಂಧಾಗ ಕೌಶಿಕನು ಅವಳನ್ನು 'ಪತಿದ್ರೋಹಿ' ಎಂದು ಕರೆಯುತ್ತಾನೆ. ಆಗ ಮಾನಿನಿಯು "ಪತಿಯನ್ನು ಪಾಪದಿಂದ ಉಳಿಸಬೇಕೆಂಬುದಿದು ಪಾಪವೇ ?" ಎಂದು ಕೇಳಿ ಅರಸನನ್ನು ನಿರುತ್ತರಗೊಳಿಸುವ ಸನ್ನಿವೇಶವು ಕೂಡ ಮಾರ್ಮಿಕವೇ ಆಗಿದೆ. ಇಂತಹ ಸನ್ನಿವೇಶಗಳಿಂದ ನಾಟಕೀಯ ಪರಿಣಾಮ ಚೆನ್ನಾಗಿಯೇ ಆಗುತ್ತದೆ. ಇಂತಹ ಕುಶಲ ಸನ್ನಿವೇಶಗಳನ್ನು ರಚಿಸಿರುವ ಶ್ರೀ. ಕಂಠಿಯವರ ಚಾತುರ್ಯವನ್ನು ನಾವು ಇಲ್ಲಿ ಗುರುತಿಸದೆ ಇರಲಾರೆವು.

೫

ಚೆನ್ನಮಲ್ಲಿಕಾರ್ಜುನನಲ್ಲಿ ಮನವು ಮಗ್ನವಾಗಿ 'ಬಾ. ಬಾ. ಪುರುಷಾ ಬೇಗ ಬಾರಾ। ನಿನ್ನ ಬರವು ನನ್ನ ಪ್ರಾಣದ ಬರುವಿಕೆಯು ಬಾರಯ್ಯಾ।' ಎಂದು ಹಂಬಲಿಸುತ್ತಿರುವ ಅಕ್ಕ ಮಹಾದೇವಿಯ ಚಿತ್ರದಿಂದಲೇ ಈ ನಾಟಕವು ಆರಂಭವಾಗುತ್ತದೆ. ಒಂದು ಮಧ್ಯರಾತ್ರಿಯಿಂದ ಆರಂಭವಾಗಿ ಮರುದಿನ ಮಧ್ಯರಾತ್ರಿಗೆ ಈ ನಾಟಕವು ಮುಗಿಯುತ್ತಿದೆ. ಆದರೆ ಈ ೨೪ ತಾಸುಗಳಲ್ಲಿ ಅದೆಷ್ಟು ಮಹತ್ವದ ಘಟನೆಗಳು ನಡೆಯುತ್ತಿವೆ ? ಮಿಂಚಿನ ವೇಗದಿಂದ ಒಂದರ ಮೇಲೊಂದು ಸಂಗತಿಗಳು ನಡೆದು ಅಕ್ಕನು ಭಾವಾವೇಶದಿಂದ ಪೂರ್ಣ ತಿಳಿವಿನ ವರೆಗಿನ ಅಂತಸ್ತುಗಳನ್ನು ಮುಟ್ಟುತ್ತಾಳೆ— ಜಗದಾರಾಧ್ಯನು ಮುಟ್ಟಿಸುತ್ತಾನೆ. ತನ್ನಿಚ್ಛೆಯಿಂದಲ್ಲದಿದ್ದರೂ ಕೌಶಿಕನು ಅದಕ್ಕೆ ಕಾರಣವಾಗುತ್ತಾನೆ. ಕೊನೆಗೆ ಅಕ್ಕನು, 'ನಿನ್ನೀ

ಮಾಯೆಗೆ ನಾನಂಜುವಳಲ್ಲ' ಎಂಬ ಧೀರತನವನ್ನು ಪಡೆಯುತ್ತಾಳೆ. ಹಿಂದಿನ ದಿನ ಮಧ್ಯರಾತ್ರಿಯಲ್ಲಿ ಮನೆಬಿಟ್ಟು, ಕೌಶಿಕನ ಕುಟಿಲತನದಿಂದ ಪಾರಾಗಿ, ಮನೆ ಸೇರಿ, ದುಷ್ಟ ಕೌಶಿಕನಿಂದ ತನ್ನ ತಾಯಿ-ತಂದೆಗಳಿಗಾಗುವ ಬವಣೆಯನ್ನು ತಪ್ಪಿಸಲು ಮರುದಿನ ರಾತ್ರಿ ಕೌಶಿಕನನ್ನೆದುರಿಸಿ, ವಾಗ್ವಾದದಲ್ಲಿ ಸೋಲಿಸಿ ಗುರಿಯ ಕಡೆಗೆ ನಡೆಯುತ್ತಾಳೆ ಹೀಗೆ ಕಥಾವಸ್ತುವು ಸಣ್ಣದಾಗಿದ್ದರೂ ನಾಟಕಕಾರರು ತಮ್ಮ ಕುಶಲತೆಯಿಂದ ಅಲ್ಲಲ್ಲಿ ಮಾರ್ಮಿಕ ಸನ್ನಿವೇಶಗಳನ್ನು ಹೆಣೆದು ಮಾರ್ಮಿಕ ಪಾತ್ರಗಳನ್ನು ರಚಿಸಿ ಅಕ್ಕನ ಈ ಆಧ್ಯಾತ್ಮಿಕ ವಿಕಾಸವನ್ನು ಸುಂದರವಾಗಿ ರಚಿಸಿದ್ದಾರೆ. **ಕುಮಾರ, ಮಾನಿನಿ, ಕಂಚುಕಿ, ಚತುರಿಕೆ** ಎಂಬ ಪಾತ್ರಗಳು ನಾಟಕದ ವಸ್ತುವಿನ ದೃಷ್ಟಿಯಿಂದ ಮಹತ್ವದವುಗಳಾಗಿಲ್ಲ. ಆದರೆ ನಾಟಕದ ಸೊಗಸನ್ನು ಹೆಚ್ಚಿಸುವ ದೃಷ್ಟಿಯಿಂದ ಆ ಪಾತ್ರಗಳಿಗೆ ಮಹತ್ವವಿದೆ ಕುಮಾರನು ಬರುವ ಸನ್ನಿವೇಶಗಳು ಹಾಸ್ಯದ ಬುಗ್ಗೆಗಳಾಗಿವೆ. ಎಬಡನಂತೆ ತೋರಿದರೂ ಆತನು ಸ್ಪಷ್ಟ ಹಾಗು ಮಾರ್ಮಿಕ ಮಾತುಗಳನ್ನು ತನ್ನ ಅತ್ತೆ ಮಾವಂದಿರಿಗೆ ಹೇಳುತ್ತಾನೆ. ಮಾನಿನಿ, ಕೌಶಿಕರ ಆರಂಭದ ಸರಸ ಸಲ್ಲಾಪದ ಪ್ರಸಂಗವು ನಾಟಕಕಾರರ ಜಾಣ್ಮೆಯನ್ನು ಸೂಚಿಸುತ್ತಿದೆ. ಆದರೆ ಆ ಸರಸವು ಬೇಗನೇ ವಿರಸವಾಗುವದು. ಪಾಪಕೂಪದಿ ಮುಳುಗುತಿಹ ಪತಿಯನು ಉಳಿಸಲು ಸಾಹಸಗೈದ ಧೀರೆ ಮಾನಿನಿಯು. ಕೌಶಿಕನ ಬಲೆಯಲ್ಲಿ ಬಿದ್ದ ಮಹಾದೇವಿಯನ್ನು ಆಕೆ ಉಳಿಸಲು ಯತ್ನಿಸುತ್ತಾಳೆ. ಮಹಾದೇವಿಯ ತಾಯಿತಂದೆಗಳನ್ನು ಉಳಿಸುವ ಪರೋಪಕಾರದ ಕಾರ್ಯವನ್ನು ಅವಳು ಕೈಕೊಳ್ಳುತ್ತಾಳೆ. ವಿರಾಗಿಣಿ ಅಕ್ಕಮಹಾದೇವಿಯನ್ನುಳಿದರೆ ಈ ನಾಟಕದ ಪ್ರಮುಖ ಪಾತ್ರಗಳಲ್ಲಿ ಮಾನಿನಿಗೆ ಮೇಲಿನ ಸ್ಥಾನವಿದೆ. ಕಂಚುಕಿ, ಚತುರಿಕೆಯರ ಸಂವಾದದಲ್ಲಿ ನಗೆಯಿದೆ. ನಮ್ಮ ಪ್ರಾಚೀನ ನಾಟಕಗಳ ಛಾಯೆಯನ್ನು ಇಲ್ಲಿ ಕಾಣಬಹುದು. 'ಚತುರಿಕೆ' ಎಂಬ ಅಂಕಿತನಾಮವು ಅನ್ವರ್ಥಕವಾಗುವಂತೆ ನಾಟಕಕಾರರು ಮಾಡಿದ್ದಾರೆ.

ಅಕ್ಕಮಹಾದೇವಿಯಂತೂ ಈ ನಾಟಕದ ಜೀವಾಳ. ಜಗದಾರಾಧ್ಯನಂತಹ ಅಲೌಕಿಕ ಗುರುವಿನಿಂದಲೂ "ಕೇಳು ಕೇಳೀದೇವಿ ಮಹಾದೇವಿ. ಸಾಮಾನ್ಯಳೆಂದೆನಬೇಡ. **ಅಲೌಕಿಕವು ಇವಳೀ ಮೂರ್ತಿ.** ನಿನ್ನ ರಾಜ್ಯಕೆ ಘನವಾದ ಕೀರ್ತಿ, ಎಂದು ಹೊಗಳಿಸಿಕೊಳ್ಳುವ ಅರ್ಹತೆಯುಳ್ಳವಳು. ಅವಳ ದಿವ್ಯ ರೂಪವಂತೂ ಕೌಶಿಕನಂತಹ ರಸಿಕನನ್ನು ಮೋಹಗೊಳಿಸಿದೆ. ಅವಳಿಗೆ ರಾಟೆಯನ್ನು ತಿರುವುವ ಹವ್ಯಾಸವೂ ಇದೆ. ಅರಸನ ಅಧಿಕಾರಿಗಳನ್ನೂ, ಅರಸನನ್ನೂ ಎದುರಿಸುವ ಧೀರತನವಿದೆ. ಚೆನ್ನಮಲ್ಲಿಕಾರ್ಜುನನ ಸೊತ್ತಾದ ಆಕೆಯನ್ನು ಕೌಶಿಕನು ತಪ್ಪಾಗಿ ನಾಡಿನರಸನ ಸೊತ್ತೆಂದು ಬಗೆದನು. ಕೊನೆಗೆ ತನ್ನ ತಪ್ಪನ್ನರಿತು 'ತಾಯೆ, ತಾಯೆ,' ಎಂದು ಆತನು ಆಕೆಯ ಬೆಂಗೊಂಡು ಹೋಗಬೇಕಾಯಿತು. ಈ ಘಟನೆ ಅಕ್ಕಮಹಾದೇವಿಯ ಅಲೌಕಿಕ ವ್ಯಕ್ತಿತ್ವದ ಗುರುತು.

೬

ಕೆಲವೊಂದು ಆಕಸ್ಮಿಕ ಘಟನೆಗಳ ಮೂಲಕ ನಾಟಕೀಯ ಪರಿಣಾಮವನ್ನುಂಟು ಮಾಡುವದು ಈ ನಾಟಕಕಾರರ ವೈಶಿಷ್ಟ್ಯವೆಂಬಂತೆ ತೋರುತ್ತಿದೆ. ಅಕ್ಕನ ನಾಟ್ಯಮಯ ಜೀವನ ನಿರೂಪಣೆಗೆ ಅದು ಉಚಿತವೂ ಆಗಬಹುದು. ಕೆಳಗಣ ಉದಾಹರಣೆಗಳನ್ನು ಅವಲೋಕಿಸಬೇಕು: (೧) ರಾಜೋದ್ಯಾನದಲ್ಲಿ ನಿಸ್ಸಹಾಯಳಾಗಿ ಬಿದ್ದಿರುವ ಮಹಾದೇವಿಯನ್ನು ಕೌಶಿಕನು ಅಪ್ಪಿಕೊಳ್ಳಬೇಕೆನ್ನುವಾಗ ಆಕಸ್ಮಿಕವಾಗಿ ಗಿಡದಿಂದ ಒಂದು ಹಣ್ಣು ಒಣಗಿದ ಎಲೆಗಳ ಮೇಲೆ ಬಿದ್ದು ಕೌಶಿಕನನ್ನು ಹೆದರಿಸುತ್ತಿದೆ. (೨) ಕೌಶಿಕನ ವಿಲಾಸ ಮಂದಿರದಲ್ಲಿ ಇಂತಹದೇ ಪ್ರಸಂಗದಲ್ಲಿ 'ಕಡಲ್ ಕಡಲೆಂದು' ಸಿಡಿಲೆರಗುತ್ತಿದೆ. (೩) ಆ ಮೇಲೆ ರಾಜಮಂದಿರದಲ್ಲಿ ಬೆಂಕಿಯ ಭೀಕರವಾದ ಜ್ವಾಲೆಯೇಳುತ್ತದೆ. ಈ ಸನ್ನಿವೇಶಗಳು ಆಕಸ್ಮಿಕವಾದರೂ ನಾಟಕಕಾರರು ಅವುಗಳ ಉಪಯೋಗವನ್ನು ಸರಿಯಾಗಿ ಅರಿತುಕೊಂಡು ಅವುಗಳನ್ನು

ಅಲ್ಲಲ್ಲಿ ಬೇಕೆಂದೇ ಉಪಯೋಗಿಸಿಕೊಂಡಿದ್ದಾರೆ. ಆಕಸ್ಮಿಕವೆನ್ನಿಸುವ ಈ ಘಟನೆಗಳನ್ನಲ್ಲದೆ ನಾಟಕಕಾರರು ಸ್ವಾಭಾವಿಕವಾದ ಕೆಲವು ಸುಂದರ ಸನ್ನಿವೇಶಗಳನ್ನು ಹೆಣೆದಿದ್ದಾರೆ: (೧) ಅಕ್ಕನನ್ನು ಬಿಡಿಸಿಕೊಳ್ಳಲು ಜಗದಾರಾಧ್ಯನ ಬರುವಿಕೆ (ಅ. ೧ ದೃಶ್ಯ ೫.) (೨) ಕುಮಾರನು ಯಮದೂತರ ಪ್ರಸ್ತಾಪವೆತ್ತಿದಾಗ (ಅ. ೨. ದೃ. ೩.) ರಾಜದೂತರ ಆಗಮನ; (೩) ಅಕ್ಕನ ಸಿರಪರಾಧಿ ತಾಯಿತಂದೆಗಳನ್ನು ಬಿಡಿಸಲು ಮಾನಿನಿಯ ಸಾಹಸ (ಅ. ೩. ದೃ. ೨); (೪) ಕುಮಾರ ಹಾಗೂ ಆತನ ಮಾವ ಅಕ್ಕನನ್ನು ಶೋಧಿಸಲು ಹೊರಟ ದೃಶ್ಯ (ಅ. ೧. ದೃ. ೪.).

ಸನ್ನಿವೇಶಗಳನ್ನು ಹೊಂದಿಸುವಲ್ಲಿಯ ಕುಶಲತೆಯು ನಾಟಕದಲ್ಲಿಯ ಮಾತುಗಾರಿಕೆಯಲ್ಲಿ ಇನ್ನೂ ಮುಂದುವರಿದಿದೆ. ಇದಕ್ಕೆ ನಿದರ್ಶನವು ಕುಮಾರ-ಸುಮತಿ; ನಿರ್ಮಲ-ಕುಮಾರ ಇವರ ಸಂಭಾಷಣೆಗಳಲ್ಲಿ ಸಾಕಷ್ಟಿದೆ. ಮಹಾದೇವಿ ಭಾವಪರವಶತೆಯಿಂದ ಮನೆ ತೊರೆದಾಗ ನಡೆದ ಸಂಭಾಷಣೆಯಲ್ಲಿ ಸುಮತಿ 'ನಮಗೆ ಮಗಳ ಚಿಂತೆ; ನಿನಗೆ ಮದುವೆಯ ಚಿಂತೆ' ಎಂದು ಹೇಳುತ್ತಾಳೆ. ಎರಡೂ ನಿಜವೇ. ಮಾನಿನಿಯ ಸೊಬಗಿನ ವೇಷವನ್ನು ಕಂಡಾಗ ಕೌಶಿಕನು ಆನಂದಾತಿರೇಕದಿಂದ "ವನದೇವಿಯೋ ಇಂದೆನಗೆ ಒಲಿದು ಬಂದಿಹಳು" ಎಂದು ಹೇಳಿದರೆ, ಮಾನಿನಿ "ನಿಮಗೇನು ಅರಸರಿಗೆ? ದಿನದಿನವು ಎಷ್ಟು ಜನ ದೇವಿಯರು ಒಲಿದು ಬರುವರೋ ಏನೋ" ಎಂದು ಕೊಂಕು ನುಡಿಯುತ್ತಾಳೆ. ಮಾನಿನಿಯ ಈ ಮಾತು ವಿನೋದಗರ್ಭಿತವೆಂದು ಕೌಶಿಕನಿಗೆ ತಿಳಿಯದೆ ಹೋದುದರಿಂದ ಆತನು ಪೇಚಾಟಕ್ಕೆ ಈಡಾಗುತ್ತಾನೆ. Woman, thy name is frailty ಎಂದು ಷೆಕ್ಸಪಿಯರನು ಹೇಳಿದನು. ಈ ನಾಟಕಕಾರರು 'ಸಂಶಯವನೆ ಹೆಣ್ಣುರೂಪಾಗಿ ಹುಟ್ಟಿಸಿದನೇ ಆ ದೇವ' ಎಂಬ ಮಾತನ್ನು ಕೌಶಿಕನ ಬಾಯಲ್ಲಿ ಹಾಕಿದ್ದಾರೆ. ಕಂಚುಕಿ, ಚತುರಿಕೆಯರ ಸಂವಾದದಲ್ಲಿ ಕಂಚುಕಿ 'ನಾನು ಹರೆಯದವನಾಗಿದ್ದಾಗ........ ಹುಡುಗಿಯರು ಕದ್ದು

ನೋಡಿ ಮುದ್ದು ತೋರಿದ್ದುಂಟು........' ಎಂದು ಜಂಭ ಕೊಚ್ಚಿದನು. ಅದಕ್ಕೆ ಚತುರಿಕೆಯ ಚತುರ ಮಾರುತ್ತರವಿದು; "ಪಾಪ ಕದ್ದು ನೋಡಿದವರಲ್ಲಾಗಲಿ, ಬಿದ್ದು ಬೇಡಿಕೊಂಡವರಲ್ಲಾಗಲಿ, ಈ ಮುಪ್ಪಿನಲ್ಲಿ ಕೈಕೊಟ್ಟು ಕುಣಿಯಲು ಒಬ್ಬಳಾದರೂ ಇರಬಾರದೇ." ಮಧ್ಯರಾತ್ರಿಯಲ್ಲಿ ಮಹಾದೇವಿಯನ್ನು ಹುಡುಕಲು ಹೋದಾಗ ನಿರ್ಮಲನು "ಮಹಾದೇವಿ ಈ ದಾರಿಯಿಂದ ಹೋಗಿರಲಿಕ್ಕಿಲ್ಲವೇ'' ಎಂದು ಕೇಳಿದರೆ ಕುಮಾರನು 'ಮೊದಲೇ ದಾರಿ ಬಿಟ್ಟವಳಿಗೆ ಈ ದಾರಿ ಆ ದಾರಿ, ಯಾವ ದಾರಿ ಏನು ಮಾವಾ' ಎಂದು ಚುಚ್ಚುಮಾತು ಹೇಳುತ್ತಾನೆ. ನಿರ್ಮಲನು 'ಸಾಕು ಬಾಯಿ ಮುಚ್ಚು' ಎಂದು ಹೇಳಿದರೆ 'ನಮ್ಮಂಥವರು ಬಾಯಿ ಮುಚ್ಚಿದ್ದರಿಂದಲೇ ಇಂಥ ಕಳ್ಳ ಗುರುಗಳ ಚೆಲ್ಲಾಟ ಹೆಚ್ಚಿತು' ಎನ್ನುತ್ತಾನೆ. ಈ ಮಾತಿನ ವಿಡಂಬನವನ್ನು ನಾವೀಗ ಸರಿಯಾಗಿ ಗುರುತಿಸಬಹುದು.

ಲೇಖಕರು ಅಲ್ಲಲ್ಲಿ ಕೆಲವು ಅನುಭವದ, ಅರ್ಥಪೂರ್ಣ ಮಾತುಗಳನ್ನು ಹೇಳಿದ್ದಾರೆ. ಕೆಲವನ್ನು ಇಲ್ಲಿ ನೋಡಬೇಕು: 'ಪ್ರೇಮವಿಲ್ಲದ ಪ್ರಣಯವೆಂದರದು ತಾ ಪೆಣದೊಡನೆ ಸರಸವಾಡಿದಂತಿಹುದು.' ಹುಟ್ಟಿದೂರನ್ನು ಬಿಡುವುದು ಹೇಗೆಂದು ಒಬ್ಬನು ವಿಚಾರಿಸುವಾಗ " ಹುಟ್ಟಿದೂರಂತೆ, ಹುಟ್ಟಿದೂರಲ್ಲಿ ಹೊಟ್ಟೆಕಟ್ಟಿ ಬಡತನದಲ್ಲಿ ಬಳಲುವದಕ್ಕಿಂತ ಬೇರೂರಿಗೆ ಹೋಗಿ ತಿಂದುಂಡು ಸುಖದಿಂದಿರುವದು ನೆಟ್ಟಗಲ್ಲವೇನು" ಎಂದು ಲೇಖಕರು ಹೇಳಿಸುತ್ತಾರೆ.

೭

ಅಕ್ಕನ ಕಾವ್ಯಮಯ ಜೀವನವನ್ನು ಚಿತ್ರಿಸಲು ಲೇಖಕರು ವಾಡಿಕೆಯ ಗದ್ಯವನ್ನು ಬಿಟ್ಟು ಪದ್ಯದ ಛಾಯೆಯ ಗದ್ಯವನ್ನು ಉಪಯೋಗಿಸಿಕೊಂಡಿದ್ದಾರೆ. ಇಂತಹ ಭಾಷಾಪ್ರಯೋಗ ಪ್ರಾಯೋಗಿಕವಾಗಿಯೇ ಉಳಿಯಬೇಕಾಗುತ್ತಿದೆ. ಇಂತಹ ಬರವಣಿಗೆಯು ವ್ಯಾಕರಣದ ಕಟ್ಟು ನಿಟ್ಟುಗಳಿಗೆ ಅಳವಡುವುದಿಲ್ಲ. ಅಂತೆಯೇ ಈ ನಾಟಕದಲ್ಲಿಯ ಭಾಷಾ

ಪ್ರಯೋಗದಲ್ಲಿ ವ್ಯಾಕರಣದ ದೃಷ್ಟಿಯಿಂದ ತಪ್ಪುಗಳನ್ನು ಎತ್ತಿ ತೋರಿಸಲು ಸಾಧ್ಯವಿದೆ. ಲೇಖಕರಿಗೂ ಈ ಮಾತು ಗೊತ್ತಿಲ್ಲವೆಂದಲ್ಲ. ಆದರೆ, ಅವರು ತಮ್ಮ ಭಾವನಾಲಹರಿಯನ್ನು ಅರಳಿಸಲು ಇಂತಹ ಲಹರಿಯ ಭಾಷೆಯೇ ಉಚಿತವೆಂದು ತಿಳಿಯುತ್ತಾರೆ. ಆದರೆ ವ್ಯಾಕರಣದ ದೃಷ್ಟಿಯಿಂದ ತಪ್ಪುಗಳನ್ನೊಳಗೊಂಡ ಇಂತಹ ಭಾಷೆಯನ್ನು ಭಾಷಾ ಪರಿಶುದ್ಧತೆಯ ವಾದಿಗಳು ಎಷ್ಟರಮಟ್ಟಿಗೆ ಒಪ್ಪಬಹುದೆಂಬ ಪ್ರಶ್ನೆಯೇನೋ ಹಾಗೆಯೇ ಉಳಿಯುತ್ತದೆ. ಭಾಷಾಪ್ರಯೋಗದ ತಪ್ಪುಗಳನ್ನು ಬಿಟ್ಟು ಪದ್ಯದ ಛಾಯೆಯ ಗದ್ಯವನ್ನು ಬಳಸಿಕೊಳ್ಳುವುದು ವಿಹಿತವಾದೀತು. ಈ ಲಹರಿಯ ಭಾಷೆಯಲ್ಲಿ ಕೆಲವೆಡೆ ಅಚ್ಚಿನ ದೋಷಗಳೂ ನುಸುಳಿರುವುದುಂಟು. ಆದರೆ ಅವಾವುವೂ ಈ ನಾಟಕದ ಸೊಗಸನ್ನು ಅರಿಯಲು ತೊಡಕಾಗಲಿಕ್ಕಿಲ್ಲವೆಂದು ನಾನು ನಂಬುತ್ತೇನೆ.

ಮುನ್ನುಡಿ ದೀರ್ಘವಾಯಿತು, ನಿಜ ಮುನ್ನುಡಿಯನ್ನು ಬರೆಯಲು ಇದ್ದ ಕಾರಣಗಳೇ ಅದು ದೀರ್ಘವಾಗುವದಕ್ಕೂ ಕಾರಣಗಳಾಗಿವೆ. ಸಲಿಗೆಯ ಸ್ನೇಹಿತರೊಬ್ಬರ ಕೃತಿಯನ್ನು ಆಸ್ಥೆಯಿಂದ ಓದಿದಾಗ ನನಗೆ ಹೊಳೆದ ವಿಚಾರಗಳನ್ನೆಲ್ಲ ಇಲ್ಲಿ ಸೂಚಿಸಲು ಯತ್ನಿಸಿದ್ದೇನೆ. ಆದರೆ ಈ ಕೃತಿಯ ಗುಣದೋಷಗಳನ್ನು ನಿರ್ಣಯಿಸುವ ಕೆಲಸ ಓದುಗರದು; ವಿಮರ್ಶಕರದು, ಎಂಬ ಮಾತನ್ನು ನಾನೂ ಒಪ್ಪುತ್ತೇನೆ. ಈ ನಾಟಕದ, ನಾಟಕಕರ್ತರ ಉದ್ದೇಶವನ್ನು ಅರಿತುಕೊಳ್ಳಲು, ಹಾಗೂ ಇದರಲ್ಲಿಯ ಸೊಗಸನ್ನು ಗುರುತಿಸಲು ಈ ಮುನ್ನುಡಿಯು ಕಾರಣವಾದರೆ ನನ್ನ ಕೆಲಸವಾದಂತಾಯಿತು.

ಮಾಳಮಡ್ಡಿ.
ಧಾರವಾಡ.
ತಾ|| ೨೪—೮—೪೭.

ಎಸ್. ಎಸ್. ಮಾಳವಾಡ.
ಎಮ್. ಎ.

# ನನ್ನ ಮಾತು.

ಈ "ವಿರಾಗಿಣಿ ಅಕ್ಕಮಹಾದೇವಿ" ನಾಟಕದ ವಿಚಾರವಾಗಿ ನಾಟಕಕಾರನಾದ ನಾನು ಹೇಳಬೇಕಾದುದೆಲ್ಲವನ್ನೂ ಗೆಳೆಯ ಪ್ರೋಫೇಸರ ಮಾಳವಾಡ ಎಮ್. ಎ. ರವರು ನನ್ನಿಂದ ತಿಳಿದುಕೊಂಡು ಈ ನಾಟಕಕ್ಕೆ ಬರೆದ ತಮ್ಮ ಮುನ್ನುಡಿಯಲ್ಲಿ ಹೇಳಿಬಿಟ್ಟಿದ್ದಾರೆ. ಇನ್ನು ನನಗಿಲ್ಲಿ ಆ ವಿಧವಾದ ಕರ್ತವ್ಯವೇ ಉಳಿಯಲಿಲ್ಲವೆಂದು ಭಾವಿಸುತ್ತೇನೆ. ಇಷ್ಟಲ್ಲದೆ ಸುಹೃದಯ ವಾಚಕರಿಗೆ ನಾಟಕ ವಿಷಯದಲ್ಲಿ ಮತ್ತೇನಾದರೂ ಸಂಶಯ ಉಂಟಾದರೆ ಮತ್ತೊಮ್ಮೆ ಓದಿ ನೋಡಿ ಸಂಶಯ ಪರಿಹರಿಸಿಕೊಳ್ಳಬೇಕು. ಅಷ್ಟಾದರೂ ಸಮಾಧಾನವಾಗದಿದ್ದರೆ " ಪಿಂಡೆ ಪಿಂಡೆ ಮತಿರ್ಭಿನ್ನಾ " ಎಂದು ಸಮಾಧಾನ ಮಾಡಿಕೊಳ್ಳಬೇಕು. ಇಲ್ಲವೆ ಮಾನವ ಸೃಷ್ಟಿಯೇ ಅಪೂರ್ಣವೆಂದು ತಿಳಿಯುವ ಕೊನೆಯ ನಿರ್ಣಯವಂತೂ ಇದ್ದೇಇದೆ.

ಈ ನಾಟಕವನ್ನು ೧೯೩೫ ನೇ ಇಸ್ವಿಯಲ್ಲಿ ಬರೆದು ಮುಗಿಸಿದ್ದರೂ ಪುಸ್ತಕ ರೂಪದಲ್ಲಿ ಪ್ರಸಿದ್ಧಿಸುವ ಸಮಯವು ಈಗ ಬಂದಿದೆ. ಗೆಳೆಯರಾದ ಶ್ರೀಮಾನ್ ಎಮ್. ಎಸ್. ಬಂಡರಗಲ್ಲರವರು ಸಹಾಯ ಸೌಕರ್ಯಗಳನ್ನು ಒದಗಿಸಿ ಕೊಡದಿದ್ದರೆ ನನ್ನ ಮೊದಲಿನ ನಾಟಕಗಳಂತೆ ಇದು ಅಜ್ಞಾತವಾಗಿ ಇನ್ನೂ ಎಷ್ಟು ಕಾಲ ಉಳಿಯುತ್ತಿತ್ತೊ! ಆದಕ್ಕಾಗಿ ಗೆಳೆಯ ಬಂಡರಗಲ್ಲರವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ ಸರಿ.

ಈ ನಾಟಕ್ಕೆ ಮುನ್ನುಡಿ ಬರೆಯಲು ಮತ್ತೊಬ್ಬ ಗೆಳೆಯರಾದ ಪ್ರೊಫೇಸರ ಮಾಳವಾಡರನ್ನು ಕೇಳಿಕೊಳ್ಳಲು ಅವರು ತಮ್ಮ ದಿನದ ಭಾರವಾದ ಕರ್ತವ್ಯದಲ್ಲಿಯೂ ಬಿಡುವು ಮಾಡಿಕೊಂಡು ಮುನ್ನುಡಿ ಬೇಗ ಬರೆದು ಕೊಟ್ಟಿದ್ದಕ್ಕಾಗಿ ಅವರಿಗೂ ಕೃತಜ್ಞತೆ ಸಲ್ಲಿಸದೆ ಇರಲಾರೆ.

ಈ ನನ್ನ ನಾಟಕವನ್ನು ಅಚ್ಚುಗೊಳಿಸುವ ಕಾರ್ಯದಲ್ಲಿ ಸಹಾಯ ಮಾಡಿದ ನನ್ನ ಗೆಳೆಯರೊಬ್ಬೊಬ್ಬರ ಹೆಸರು ತಕ್ಕೊಳ್ಳದೆ ಬಳಗಕ್ಕೆಲ್ಲ ಕೃತಜ್ಞನೆಂದರೆ ಎಲ್ಲರಿಗೂ ಮುಟ್ಟಿದಂತಾಗುವದಿಲ್ಲವೆ?

**ನಾಟಕಕಾರ.**

# ಒಪ್ಪೋಲೆ.

| ತಪ್ಪು. | ಪುಟ | ಸಾಲು | ಒಪ್ಪು. |
|---|---|---|---|
| ಚೆಂಗೊಂಡು | ೯ | ೧ | ಬೆಂಗೊಂಡು |
| ದೆವ್ವಪೆಂದಂಜಿವನ ಬಿಟ್ಟು | ೧೪ | ೭ | ದೆವ್ವಪೆಂದಂಜಿ ವನಬಿಟ್ಟು |
| ಅಡವೆ | ೧೬ | ೨೦ | ಅಡವಿ |
| ಎನ್ನನೊಂಚಿಸುವೆ | ೧೮ | ೧೫ | ಎನ್ನನು ವಂಚಿಸುವೆ |
| ವಾನಿನಿಯಲ್ಲಿ | ೧೮ | ೨೪ | ಮಾನಿನಿಯಲ್ಲ |
| ಯಾವನೊರಿಸಿಹನೊಭೂಪ | ೧೯ | ೬ | ಯಾವನು ವರಿಸಿಹನೊ ಭೂಪ |
| ದಿನ ವಲ್ಲವೆಂಬುದು | ೨೫ | ೨ | ದಿನವಲ್ಲವೆಂಬುದು |
| ವಾಹಾರಾಣಿ | ೨೫ | ೧೧ | ಮಹಾರಾಣಿ |
| ಪ್ರೀತಿಗಾಗಲ್ಲವೆ? | ೨೬ | ೨೧ | ಪ್ರೀತಿಗಾಗಿ ಅಲ್ಲವೆ? |
| ಒಲವಿಗಾಗಲ್ಲವೆ? | ೨೬ | ೨೨ | ಒಲವಿಗಾಗಿ ಅಲ್ಲವೆ? |
| ಬಿಡುದೇವಿ? | ೨೭ | ೧೩ | ಬಿಡು ದೇವಿ? |
| ಬಿಡಿದೇವಿ? | ೨೭ | ೨೫ | ಬಿಡಿ ದೇವಿ? |
| ಸ್ವಲ್ಪನಿಲ್ಲಿದೇವಿ? | ೨೭ | ೨೫ | ಸ್ವಲ್ಪ ನಿಲ್ಲಿದೇವೀ |
| ನಿರ್ಮನ | ೩೦ | ೪ | ನಿರ್ಮಲನ |
| ಒಡುವೆ | ೩೦ | ೧೪ | ಒಡವೆ |
| ಉದ್ಯಾವನ | ೩೧ | ೫ | ಉದ್ಯಾನ |
| ಮದುವೆ ಯಾಗಿದೆಏನು | ೩೪ | ೧೫ | ಮದುವೆಯಾಗಿದೆಯೇನು |
| ಮದುವೆ ಯಾಗದಿದ್ದರೇನಾ-ಯಿತು | ೩೪ | ೧೫ | ಮದುವೆಯಾಗದಿದ್ದರೇನಾ-ಯಿತು |
| ಬಿಡುಗಡೆ ಯಾದೀತು | ೩೫ | ೨ | ಬಿಡುಗಡೆಯಾದೀತು |
| ಮರಿವೆ | ೩೭ | ೧೨ | ಮರವೆ |
| ಮದುವೆ ಯಾಗಲು | ೩೮ | ೧೭ | ಮದುವೆಯಾಗಲು |
| ಕೌಶಿಕ ದೊರೆಯುಬಳಿಗೆ | ೫೩ | ೧೬ | ಕೌಶಿಕದೊರೆಯು ಬಳಿಗೆ |

| | | | |
|---|---|---|---|
| **ದುಃಖಿತೆಗೆದೇವೀ** | ೪೬ | ೬ | ದುಃಖಿತೆಗೆ ದೇವಿಃ |
| **ಪ್ರೇಮವನುರಾಗಗಳನಾ-ದೇನಲ್ಲಿರಿಸಿ** | ೪೯ | ೧೯ | ಪ್ರೇಮವನುರಾಗಗಳನಾ ದೇವ-ನಲ್ಲಿರಿಸಿ |
| **ಚಿತ್ಕಾರ** | ೫೦ | ೧೭ | ಚೀತ್ಕಾರ |
| **ಮುಸುಗಿತೀ ಮಂದಿರದಿ** | ೫೨ | ೮ | ಮುಸುಗಿತೀಮಂದಿರದಿ |
| **ಮಹಾರಾಜರುದೇವೀ** | ೫೫ | ೫೫ | ಮಹಾರಾಜರು, ದೇವೀ |
| **ನೆರಳುತ್ತು** | ೬೨ | ೧೨ | ನೆರಳುತ್ತ |
| **ನಿನ್ನೆದೆಯು ತಾಬಲುಮಿದು ವಲ್ಲವೇ** | ೬೨ | ೨೨ | ನಿನ್ನೆದೆಯುತಾ ಬಲುಮಿದುವ-ಲ್ಲವೇ |
| **ಲಾವಣ್ಣ** | ೬೫ | ೧೧ | ಲಾವಣ್ಯ |

ಓಂ

# ವಿರಾಗಿಣಿ

## ಪಾತ್ರ ಪರಿಚಯ.

| | |
|---|---|
| ಅಕ್ಕಮಹಾದೇವಿ:— | ನಾಟಕದ ನಾಯಿಕಾ (ವಿರಾಗಿಣಿ) |
| ಜಗದಾರಾಧ್ಯ:— | ಮಹಾದೇವಿಯ ಗುರು. |
| ನಿರ್ಮಲ:— | ಮಹಾದೇವಿಯ ತಂದೆ. |
| ಸುಮತಿ:— | ಮಹಾದೇವಿಯ ತಾಯಿ. |
| ಕುಮಾರ:— | ನಿರ್ಮಲನ ಸೋದರ ಅಳಿಯ. |
| ಕೌಶಿಕ:— | ಅರಸು |
| ಮಾನಿನಿ:— | ಕೌಶಿಕನರಾಣಿ. |
| ಚತುರಿಕೆ:— | ಮಾನಿನಿಯ ಪ್ರೀತಿಯದಾಸಿ. |

ಕಂಚುಕಿ, ಅಧಿಕಾರಿ, ದೂತರೇ ಮೊದಲಾದವರು.

ಯನೆ ತೊಟ್ಟು । ದೇವಾಂಗವನುಟ್ಟು । ಚೆನ್ನಮಲ್ಲಿಕಾರ್ಜುನಯ್ಯಾ ಬಂದಾನೆಂದು, ಬಟ್ಟೆಗಳ ನೋಡಿ ನೋಡಿ ಬಾಯಾರುತ್ತಿಹೆನು ।

[ ಮುಂದೆದ್ದು ಹೋಗುತ್ತ ]

**ಉದಯದಲೆದ್ದು ನಿಮ್ಮ ನೆನೆವೆ । ಹಗಲಿರುಳು ನಿಮ್ಮ ಬರವ ಕಾಯು-ತ್ತಿರುವೆ । ಹಸೆಹಂದರವನಿಕ್ಕಿ, ನಿಮ್ಮಡಿಗಳಿಗೆ ಎಡೆಮಾಡಿಕೊಂಡಿರುವೆನಯ್ಯಾ । ಚೆನ್ನಮಲ್ಲಿಕಾರ್ಜುನಯ್ಯಾ, । ನೀನು ಯಾವಾಗ ಬರುವಿಯೆಂದು ।**

ಅಯ್ಯೋ ನಾನೆಂತಹ ಮರುಳು ? ಬಹು ದೂರದಿಂದ ಬಂದಿಹನೆಂಬ ಅರಿವಿಲ್ಲದೆ ಏನೇನೋ ಬಡಬಡಿಸುತ್ತಲಿರುವೆ. ಬಾ ನಲ್ಲಾ ! ಬಾ ಇಲ್ಲಿ ವಿಶ್ರಮಿಸು.

[ಎಂದು ಅವಸರದಿಂದ ಹೋಗಿ ಗದ್ದುಗೆಯ ಸರಿಪಡಿಸುತ್ತ ಸಾಮಾನು ಅತ್ತಿತ್ತ ಇಡುವಳು.]

ಶ್ರಮವ ನೀಗಿಸು. ಸತಿಸೇವೆ ಸ್ವೀಕರಿಸು. ಬಾ ಒಡೆಯ ಬಾಬೇಗ. ಮಜ್ಜನವ ಮಾಡಿಸಿ ದೇವಾಂಗವನುಡಿಸುವೆ ಬಾ. ಭಸ್ಮವನು ಹಚ್ಚಿ ಗಂಧವನು ಲೇಪಿಸುವೆ. ಅಕ್ಷತೆಯನಿಕ್ಕಿ ಆರತಿಯನೆತ್ತುವೆ. ಪುಷ್ಪವನು ಧರಿಸಿ ಪೂಜೆ ಮಾಡುವೆ ಬಾ.

[ ಅಲ್ಲಿದ್ದ ಸಾಮಾನು ನೋಡುತ್ತ ]

ಹಸಿವೆಯಡಗಿಸಲು ಮಧುರ ಫಲಗಳಿಲ್ಲುಂಟು. ಸುಗಂಧ ತಾಂಬೂಲ ಮೆಲ್ಲಲು ಮೇಲುಂಟು. ಮತ್ತೇನು ? ಮತ್ತೇನಾದರೂ ಮರೆತೆನೇ ಪರಮ ಪುರುಷನ ಪೂಜೆಗೆ ?

[ ಯೋಚಿಸುತ್ತ ತಲೆ ಅಲ್ಲಾಡಿಸಿ ]

ತೋಚದು. ಯೋಚನೆಯೇ ತೋಚದು. ಮನವು ಮಗ್ನವಾಗಿದೆ ಚೆನ್ನಮಲ್ಲಿಕಾರ್ಜುನನಲ್ಲಿ.

[ ಎದುರು ನೋಡುತ್ತ ದೈನ್ಯದಿಂದ ]

ಹೇ ದೇವ ! ಎನ್ನ ಉಪಚಾರದಲಿ ತಪ್ಪ ಕಂಡರೆ ತರಳೆ-ತಿಳಿಗೇಡಿ-ಯೆಂದು ಒಪ್ಪಮಾಡಿಕೊಳ್ವುದು ನಿಮ್ಮ ಧರ್ಮ.

[ ಎದ್ದುನಿಲ್ಲುತ್ತ ]

ಬಾ ಇನಿಯಾ ! ಬಾ ಇನ್ನು. ಸುಮ್ಮನೇಕೆ ನಿಲ್ಲುವೆ ಬಾ. ನಿಂದು ಪಾದಗಳು ನೊಂದಾವು ಬಾ.

[ ಖತಿಗೊಂಡು ]

ಮಾತನಾಡದೆ ಮೌನವೇಕೆ ಈ ರೀತಿ ? ಕೋಪವೇ ? ಎನ್ನಲಿ ಕೋಪವೇ ? ಹಂಬಲಿಸಿ ಹೇಳಿಕೊಂಡರೂ ಕೋಪ. ಬೆಂಬತ್ತಿ ಬೇಡಿ-ಕೊಂಡರೂ ಕೋಪ. ಇದೆ ಏನು ನಿನ್ನ ನ್ಯಾಯ ?

[ ಉಸುರ್ಗರೆದು ]

ಬಂಜೆ ಬೇನೆಯನು ಅರಿವಳೇ ? ಮಲತಾಯಿ ಮುದ್ದು ಬಲ್ಲಳೇ ? ನೊಂದ ನೋವಾ ನೋಯದವರೆತ್ತ ಬಲ್ಲರು ?

[ ದುಃಖದಿಂದ ]

ಚೆನ್ನಮಲ್ಲಿಕಾರ್ಜುನಾ ! ನೀನಿರಿದ ಅಲಗು ಒಡಲಲ್ಲಿ ಮುರಿದು, ಹೊರಳುವವಳ ನೋಡಿ ಅರಿಯದವನಂತೆ ಇಂತು ಬಳಲಿಸುವದುಚಿತವೇ ? ಕಾಡದಿರು. ಕಾಡದಿರು ಒಡೆಯಾ ! ಕಾಡದಿರು.

[ಧಾವಿಸಲು ಆ ದೃಶ್ಯ ಮಾಯವಾಗಿ ಬಾಗಿಲಿಗೆ ಹಣೆ ತಟ್ಟುವದು. ಕೆಲಕಾಲ ದಿಙ್ಮೂಢಳಂತೆ ನಿಂತು ಹುಚ್ಚಳಂತೆ ಅತ್ತಿತ್ತ ಓಡಾಡಿ ಹುಡುಕುತ್ತ]

ಎಲ್ಲೊಡೆಯಾ ! ಎಲ್ಲಡಗಿದೆ ? ಮುಖತೋರಿ ಮನಸೆಳೆದು ಮತ್ತೆ ಲ್ಲೋಡಿದೆ ?

[ ಅತ್ತಿತ್ತ ಓಡಾಡುವಾಗ ಪೂಜಾ ಸಾಹಿತ್ಯಗಳು ಕಾಲಿಗೆ ತಾಕಿ, ಜಣ್‌ಜಣ-ಲೆಂದು ಸದ್ದಾಗುವದು. ದೀಪ ಉರುಳಿ ಕತ್ತಲೆ ಕವಿಯುವದು ]

ಇರಲಾರೆ. ಚೆನ್ನಮಲ್ಲಿಕಾರ್ಜುನಾ ! ನಿನ್ನಗಲಿ ಅರಗಳಿಗೆ ಇರ-ಲಾರೆ. ನಿನ್ನಗಲಿಕೆ ಮರಣಕ್ಕೆ ಮೇಲಹುದು. ಎಲ್ಲಿರುವೆ ? ಹೇ ದೇವ ! ಎಲ್ಲಿರುವೆ ?

[ ಕತ್ತಲಲ್ಲಿಯೇ ಬಾಗಿಲ ತೆಗೆದು ಹೋಗಿಬಿಡುವಳು. ಗಲಭೆಗೆ ಎಚ್ಚತ್ತು, ನಿರ್ಮಲನು ಅವಸರವಾಗಿ ಬರುವಾಗ ಹೊದ್ದ ವಸ್ತ್ರ ನೆಲಕ್ಕೆ ಬಿದ್ದುಬಿಡುವದು.]

**ನಿರ್ಮಲ:—** ಯಾರಲ್ಲಿ ? ಕುಮಾರಾ ! ಕುಮಾರಾ !! ಬೆಳಕು. ಬೆಳಕು ತಾರೇ ಸುಮತಿ. ಏನೋ ಸಪ್ಪಳವಾಯಿತು ಬೇಗ ಬಾ.

[ ಕತ್ತಲಲ್ಲಿಯೇ ಅತ್ತಿತ್ತ ಕೈಯ್ಯಾಡಿಸಲು ಬಾಗಿಲು ತೆಗೆದುದನ್ನು ಕಂಡು ಗಾಬರಿಯಾಗಿ ]

ಅಯ್ಯೋ ! ಮೋಸವಾಗಿದೆ. ಮಹಾದೇವಿ ! ಮಹಾದೇವಿ !! ಎಲೋ ಕುಮಾರಾ ! ಕುಮಾರಾ !! ಸತ್ತೆಯೋ ಏನೋ ? ಕೂಗು ಕೇಳಿಸುವದಿಲ್ಲವೇ ? ಸುಮತೀ sss

[ ಸುಮತಿ ತೆರೆಯ ಲ್ಲಿಯೇ ಕೂಗುವಳು ]

**ಸುಮತಿ:—** ಏನಾಯ್ತು ? ಬಂದೆ, ಬಂದೆ. ಲೋ ಕುಮಾರಾ! ಕುಮಾರಾ !! ಏಳು, ಏಳು.

[ಸುಮತಿಯು ಕೈಯಲ್ಲಿ ದೀಪವಿಡಿದು ಅವಸರವಾಗಿ ಬರುವಳು ಅವಳ ಜಡೆ ಬಿಚ್ಚಿದೆ. ಸೀರೆ ಸರಿಯಾಗಿ ಹೊದ್ದಂತಿಲ್ಲಾ ಅಲ್ಲಲ್ಲಿ ಮುದ್ದೆ ಮುದ್ದೆಯಾಗಿದೆ. ಅತ್ತಿತ್ತ ಗಾಬರಿಯಿಂದ ನೋಡಿ]

ಏನಾಯ್ತು ? ಏನಾಯ್ತು ? ಮಹಾದೇವೀ ?

[ ನಿರ್ಮಲನು ಬೆಳಕಿನಲ್ಲಿ ಅತ್ತಿತ್ತ ನೋಡಿ ]

**ನಿರ್ಮಲ:—** (ಅಧೀರತೆಯಿಂದ) ಹೌದು ಮಹಾದೇವಿ. ಬಾಗಿಲು ತೆಗೆದಿದೆ. ಏನಾಯಿತೋ.

[ ಹುಚ್ಚನಂತೆ ಹೊರಕ್ಕೆ ಹೋಗುವನು ]

**ಸುಮತಿ:—**(ಭ್ರಮೆಗೊಂಡವಳಂತೆ) ಏನಾಯಿತು ? ಕುಮಾರಾ ! ಕುಮಾರಾ !! ಅಯ್ಯೋ ಮಹಾದೇವೀ. ಶಿವ ಶಿವ.

[ನೆಲಕ್ಕೆ ದೀಪವಿಟ್ಟು ಹತಾಶಳಾಗಿ ಕುಳಿತುಬಿಡುವಳು. ಕುಮಾರನು ತೂಕಡಿಸುತ್ತ ಬಿಚ್ಚಿದ ಧೋತರ ಅತ್ತಿತ್ತ ಸಿಕ್ಕಿಸುತ್ತ ಬರುವನು.]

**ಕುಮಾರ:—** (ಆಕಳಿಸುತ್ತ) ಏನತ್ತೇ ?

**ಸುಮತಿ:—** (ಅವನತ್ತ ತಿರುಗಿ ಆಕ್ರೋಶದಿಂದ) ಏನತ್ತೆ. ಏನತ್ತೆ. ಇಷ್ಟು ಹೊತ್ತು ಅತ್ತದ್ದು ಕೇಳಲಿಲ್ಲವೇ ?

[ ಅತ್ತಿತ್ತ ನೋಡುತ್ತ ]

ಅಯ್ಯೋ! ಅವರೂ ಹೋದರು. ಶಿವ ಶಿವಾ ! ಹೇಗೆ ಮಾಡಲಿ ?

[ತಲೆಗೆ ಕೈಹಚ್ಚಿ ಕಣ್ಣೀರಿಡುವಳು. ಕುಮಾರನು ಅಲ್ಲಿ ಬಿದ್ದಿದ್ದ ನಿರ್ಮಲನ ವಸ್ತ್ರವನ್ನು ಹೊದ್ದುಕೊಂಡು ಆಕಳಿಸುತ್ತ ನೆಲಕ್ಕೆ ಕುಳಿತು ]

**ಕುಮಾರ:—** ಏನು! ಅವರೂ ಹೋದರೇ ? ಉಪಾಯವಿಲ್ಲಾ. ಇನ್ನು ಇದ್ದವರನ್ನು ನೋಡಿ ಸಮಾಧಾನ ಮಾಡಿಕೋ ಅತ್ತೇ.

[ನೆಲದ ಮೇಲೆ ಮಲಗಿಬಿಡುವ. ಸುಮತಿ ಅವನನ್ನು ದುರದುರನೆ ನೋಡಿ]

**ಸುಮತಿ:—** ಮಾಡಿಕೊಳ್ಳುತ್ತೇನೆ. ನಿನ್ನಂತಹ ಕತ್ತೆಯನ್ನು ನೋಡಿ ಸಮಾಧಾನ ಮಾಡಿಕೊಳ್ಳುತ್ತೇನೆ.

**ಕುಮಾರ:—** ಹೊತ್ತು ಬಂದಮೇಲೆ ಮಾಡುವದೇನು ? ಕತ್ತೆ ಯೇನು........

[ ಅಷ್ಟರಲ್ಲಿಯೇ ಸುಮತಿ ಸಂತಾಪದಿಂದೆದ್ದು ಮುಸುಕು ತೆಗೆದು ಕಿವಿ ಹಿಡಿದೆಳೆವಳು. ]

**ಸುಮತಿ:—** ನಮ್ಮ ದುಃಖದ ಸುದ್ದಿಯೇ ಇಲ್ಲಾ. ಎಲೋ, ಏ! ನಿದ್ದೆ, ನಿದ್ದೆ. ಸ್ವಲ್ಪಾದರೂ ಬುದ್ಧಿ ಇಲ್ಲವೇನೋ ?

[ ಎದ್ದು ಕುಳಿತು ಕಿವಿಬಿಡಿಸಿಕೊಳ್ಳುತ್ತ ]

**ಕುಮಾರ:—** ನಿದ್ದೆ ಮಾಡುವಾಗ ಬುದ್ಧಿ ಇರುವದೇನತ್ತೇ ? ಬುದ್ಧಿ ಇದ್ದವರು ನಿದ್ದೆಯನ್ನೇ ಮಾಡುವದಿಲ್ಲವೇ ?

[ ಗೆದ್ದವನಂತೆ ನೋಡುತ್ತ ]

ಅತ್ತೇ! ನೀನು ನಿದ್ದೆ ಮಾಡುವದನ್ನು ನೋಡಿದ್ದೇನೆ. ಮಾವ ನಿರ್ಮಲಶ್ರೇಷ್ಠಿ ಆತ ನಿದ್ದೆ ಮಾಡುವದನ್ನೂ ನೋಡಿದ್ದೇನೆ. ಮಹಾದೇವಿ ಯಂತೂ ಅದೇನು ಧ್ಯಾನವೋ-ಗೀನವೋ ಯಾವಾಗಲೂ ನಿದ್ದೆ ಮಾಡು ವವರಂತೆ ಕಣ್ಣು ಮುಚ್ಚಿಯೇ ಇರುತ್ತಾಳೆ. ಅಂದಮೇಲೆ ಎಲ್ಲರೂ ಬುದ್ಧಿ ಇಲ್ಲದವರೇ ಎಂದಂತಾಯಿತಲ್ಲಾ ? ನಾನೊಬ್ಬನೇ ಬುದ್ಧಿಗೇಡಿ ಹೇಗೆ ಅತ್ತೇ ?

**ಸುಮತಿ:—** ನಿನ್ನತ್ತೆ ನಿನ್ನೊಡನೆ ವಾದಮಾಡಿ ತಾನೂ ಕತ್ತೆಯಾದಳು. ಬಿದ್ದುಕೋ ಎಲ್ಲಿಯಾದರೂ. ಪಂಡಿತನಿರುವಿ.

**ಕುಮಾರ:—**ನಾನು ಪಂಡಿತನಾಗಿದ್ದರೆ, ಆ ಗುರು ಜಗದಾರಾಧ್ಯ ನಂತೆ ಮಹಾದೇವಿಗೆ ಮೆಚ್ಚುಮಾಡಿ ಹುಚ್ಚು ಹಿಡಿಸುತ್ತಿದ್ದೆ. ಬೆನ್ನುಹಚ್ಚಿ ಕೊಂಡೂ ಹೋಗುತ್ತಿದ್ದೆ. ಏನು ಮಾಡಲಿ ? ಅಷ್ಟು ಪಂಡಿತನಾಗಿಲ್ಲ.

[ ಉಸುರ್ಗರೆಯುವ. ]

**ಸುಮತಿ:—** ಏನು ! ಮಹಾದೇವಿಗೆ ಹುಚ್ಚು ಹಿಡಿಸಿದ್ದು ಸಾಲದೇ ಬೆನ್ನುಹಚ್ಚಿಕೊಂಡೂ ಹೋದವನೇ ಆ ಜಗದಾರಾಧ್ಯ. ಸಂಸಾರ ಬಿಡಿಸಿ ಸನ್ಯಾಸಿನಿಯನ್ನಾಗಿ ಮಾಡಿದ್ದಲ್ಲದೆ, ನಾಡು ಬಿಡಿಸಿ ಕಾಡು ಸೇರಿಸಿದನೇ ?

**ಕುಮಾರ:—** ಎಲಾ ಕಳ್ಳ ಜಂಗಮಾ! ಊಟದ ಮೇಲೆ ಮಹಾ-ದೇವಿಯಂತಹ ಸ್ತ್ರೀರತ್ನ ದಕ್ಷಿಣೆಯೇನು ? ದಕ್ಕಿಸಿಕೋ, ದಕ್ಕಿಸಿಕೋ. ಅದು ಹೇಗೆ ದಕ್ಕಿಸಿಕೊಳ್ಳುವೆಯೋ ನೋಡುವೆ. ನನಗೆ ಮೊದಲೇ ಇದೆಲ್ಲಾ ಗೊತ್ತಿತ್ತು ಅತ್ತೀ. ಅದಕ್ಕಾಗಿಯೇ ಹಗಲೆಲ್ಲ ಹೇಳುತ್ತಾ ಬಂದೆ ಈ ಗುರುಗಳು-ಜಂಗಮರು ಅನ್ನುವವರನ್ನು ನಂಬಬೇಡಿರೆಂದು. ನೀವೆಲ್ಲಿ ಕೇಳುತ್ತೀರಿ. ಅವರನ್ನು ಮನೆ ಒಳಕ್ಕೇ ಕಾಲಿಡಗೊಡಬಾರದು. ಅಷ್ಟು ಭಕ್ತಿಯಿದ್ದರೆ, ಭಿಕ್ಷೆಹಾಕಿ ಹೊರಗಿಂದ ಹೊರಗೇ ದಾಟಹಾಕಿ ಬಿಡಬೇಕು. ಮನೆಯೊಳಗೆ ಬಿಟ್ಟರೆ ತೀರಿತು. ಮಹಾಸ್ವಾಮಿಗಳ ಕಣ್ಣೆಲ್ಲಾ ಶಿಷ್ಯರ ಹೊನ್ನು—ಹೆಣ್ಣಿನ ಮೇಲೆಯೇ.

[ ಹಾಡುವ ಧ್ವನಿ ದೂರದಲ್ಲಿ ಕೇಳಿದಂತಾದರೂ ಬರಬರುತ್ತ ಪೂರ್ಣ ಕೇಳ-ದಂತಾಗುವದು. ]

**ಸ್ಫಟಿಕದ ಘಟದಂತೆ ಒಳಹೊರಗಿಲ್ಲ ನೋಡಾ । ವಿಗಡ ಚರಿತ್ರಕ್ಕೆ ಬೆರ-ಗಾದೆನು । ನೋಡುವರೆ ಕಾಣಬರುತ್ತಿದೆ । ಮುಟ್ಟುವರೆ ಕೈಗೆ ಸಿಲುಕದು । ಹೊದ್ದುವರೆ ಸಮೀಪ । ಹತ್ತೆ ಸೇರುವರೆ ಅತ್ತತ್ತ ತೋರುತ್ತಿದೆ । ದರುಶನದಿಂದ ಅಮೃತ ಆಹಾರವಾಯಿತ್ತು । ಬೆರಸಿದೊಡೆ ಇನ್ನೆಂತೊ ಗುಹೇಶ್ವರಾ ।**

**ಸುಮತಿ:—** ಹೌದು, ಹೌದು. ಅದೇ ಆ ಜಗದಾರಾಧ್ಯನ ಧ್ವನಿ. ಹೋಗು, ಹೋಗು. ಕುಮಾರಾ ! ಬೇಗ ಹೋಗು.

**ಕುಮಾರ:**—ನಾನೇನೋ ಹೋಗಬೇಕೆನ್ನುತ್ತೇನೆ ಅತ್ತೇ, ಆದರೆ ಮನಸ್ಸು ಹೇಳುತ್ತಿದೆ— ಹೋದರೆ ಏನು ಫಲ ನಿನಗೆ? ನಾನೆಲ್ಲಾ ಮಹಾದೇವಿಯನ್ನು ಕರೆತರಬೇಕೆನ್ನುತ್ತೇನೆ. ಕೂಡಲೆ ಕೆಟ್ಟ ಮನಸ್ಸು ಕೇಳುತ್ತಿದೆ— ಕಷ್ಟಪಟ್ಟು ನೀನು ಅವಳನ್ನು ಕರೆದು ತಂದರೆ ಮದುವೆ ಆಗುವದೇನು ನಿನ್ನೊಡನೆ? ಅದಕ್ಕಾಗಿ ಹೋಗಲೋ ಬಿಡಲೋ ಅನ್ನುತ್ತೇನೆ.

**ಸುಮತಿ:**— ನಮಗೆ ಮಗಳ ಚಿಂತೆ, ನಿನಗೆ ಮದುವೆ ಚಿಂತೆ. ಹೋಗಪ್ಪಾ ಮೊದಲು ಹೋಗು. ಮಾತಿನಲ್ಲಿ ಹೊತ್ತುಗಳೆದರೆ ಮತ್ತೆ-ಲ್ಲಾದರೂ ಮರೆಯಾದಾರು ಹೋಗು.

**ಕುಮಾರ:**— ಅವರು ಭೂಮಿಯನ್ನು ಬಿಟ್ಟು ಮತ್ತೆಲ್ಲಿ ಮರೆ-ಯಾದಾರು? ಆ ಚಿಂತೆ ಬಿಡತ್ತೆ. ನನಗೆ ಕೇಳುತ್ತಿರುವ ಮಾನಸ್ಸಿನ ಮಹತ್ವದ ಪ್ರಶ್ನೆಗೇನು ಉತ್ತರ? ಹೇಳು.

**ಸುಮತಿ:**— ಮಹಾದೇವಿ ಸಿಗದೆ ಮದುವೆಯಾಗುವದು ಹೇಗೆ? ಮೂರ್ಖನಂತೆ ಮಾತಾಡಬೇಡ ಹೋಗು.

**ಕುಮಾರ:**— ನಾನನ್ನುತ್ತೇನೆ— ಮದುವೆ ಆಗದೆ ಮಹಾದೇವಿ ಸಿಗುವದು ಹೇಗೆ?

**ಸುಮತಿ:**— ಮದುವೆ, ಮದುವೆ. ಮದುವೆ ಮಾಡುತ್ತೇವೆ. ಮೊದಲು ಹೋಗು.

**ಕುಮಾರ:**— ಮದುವೆ ಮಾಡುವಿರಾ? ನೋಡಿ, ಆ ಮಹಾ-ದೇವಿ ಬೇಡೆಂದರೂ. ಹೌದು. ಮೊದಲೇ ಹೇಳುತ್ತೇನೆ.

**ಸುಮತಿ:**— ಮಾಡುತ್ತೇವೆ, ಮಾಡುತ್ತೇವೆ, ಮಾಡುತ್ತೇವೆ. ಮೊದಲು ಹೋಗು ಮಹಾರಾಯಾ.

[ **ಸಂತೋಷದಿಂದ ಜಿಗಿದು** ]

ಕುಮಾರ:— ಇನ್ನೇನು ತಡ. ಈಗ ಹಿಡಿದು ತರುತ್ತೇನೆ. ಸ್ವರ್ಗ-ಮರ್ತ್ಯ-ಪಾತಾಳ ಎಲ್ಲಾದರಿರಲಿ.

[ ಹೋಗುವನು. ಸುಮತಿ ಬಾಗಿಲದೊಳಗೆ ನಿಂತು ಅವನು ಹೋಗುದುದನ್ನು ನೋಡುತ್ತ ಉಸುರ್ಗರೆವಳು. ]

## ಪ್ರವೇಶ ೨

ಸ್ಥಳ:— ರಾಜೋದ್ಯಾನದ ಬೀದಿ. ಸಮಯ- ಮಧ್ಯರಾತ್ರಿ.

[ಬೆಳದಿಂಗಳು ಬಿದ್ದಿದೆ ಎಡಬಲಕೆ ಸಾಲಾಗಿ ಗಿಡಗಳಿವೆ ಮಾರ್ಗ ಒಂದೆಡೆಗೆ ಸರಿತ್ತು. ಅದರಾಚೆ ಚಿಕ್ಕ ಗುಡ್ಡದ ಸಾಲು. ಮತ್ತೊಂದೆಡೆಯಲ್ಲಿ ಮಾವಿನ ಗಿಡಗಳೂ, ಹುಲ್ಲುಗದ್ದೆಗಳೂ ಕಾಣುವವು. ವಸಂತಋತುವಾದುದರಿಂದ ಗಿಡಬಳ್ಳಿಗಳೆಲ್ಲಾ ಹೂಬಿಟ್ಟು ಚಂದ ಕಾಣುತ್ತಿವೆ ಮಹಾದೇವಿ ಬರುವಳು ಮಲ್ಲಿಕಾರ್ಜುನನ ಹುಡುಕುತ್ತ. ]

ಮಹಾದೇವಿ:—ಊರುಕೇರಿಗಳಲ್ಲಿ ಸುತ್ತಿದೆನು. ಅತ್ತಿತ್ತ ನೋಡಿದೆನು. ಅಲ್ಲೆಲ್ಲಿಯೂ ಚೆನ್ನಮಲ್ಲಿಕಾರ್ಜುನಾ ! ನೀ ಕಾಣಲಿಲ್ಲಾ. ಇಲ್ಲಿ ಈ ವನದಲ್ಲೆಲ್ಲು ಗಿಳಿಗಳುಲುವಿಲ್ಲ. ಕೋಗಿಲೆಯ ಸುಳುವಿಲ್ಲ. ತುಂಬಿ ಹಾಡುವದಿಲ್ಲ. ನವಿಲು ಆಡುವದಿಲ್ಲ. ಈ ಮಧ್ಯರಾತ್ರಿಯಲಿ ಎಲ್ಲವೂ ನಿದ್ರಿಸುತಲಿಹವು. ಯಾರ ಕೇಳಲಿ ಇನ್ನು ? ಚೆನ್ನಮಲ್ಲಿಕಾರ್ಜುನಾ ! ಎಲ್ಲಿ ಹುಡುಕಲಿ ನಿನ್ನ ? ಸಹಿಸೆನಯ್ಯೋ ಸಹಿಸೆ. ಈ ವಿರಹದುರಿಯನು ಸಹಿಸೆ. ಬೆಳ್ದಿಂಗಳು - ಬೆಳ್ದಿಂಗಳೇ ಬೇಗೆಯಾಯ್ತೇಕೆ ? ಚಂದ್ರಮಾ ! ಚಂದ್ರಮಾ !! ಕಿಡಿಗಳನೆ ಉಗುಳುತಿರುವಿಯಾ ಎನ್ನ ಮೇಲಿಂದು ?

[ ಗಿಡಗಳತ್ತ ನೋಡುತ್ತ ]

ಹಳ್ದಿಗೆವಿರೇಕೆ ಹೂವುಗಳೇ ? ನಗಲು ನಿನಗೇನಾಯ್ತು ಮಾಮರವೇ ? ಎನ್ನ ದುಃಖವ ಕಂಡು ನಿಮಗೆ ಸಂತಸವೇ ?

[ ಗಾಳಿಗೆ ಸೆರಗು ಕೂದಲುಗಳು ಅಲುಗುವದು ನೋಡಿ ]

ಯಾರು ? ಮಂದಮಾರುತಾ! ನೀನು ಚೆಂಗೊಂಡು ಬಂದೇಕೆ ? ಹಾ! ಗೊತ್ತಾಯ್ತು; ಗೊತ್ತಾಯ್ತು. ಮದನನ ಮುಂದಾಳು ನೀ ಬಂದ ಮೇಲಿನ್ನು, ಮದನ ಹೆದೆಯೇರಿಸಿ ಹಿಂದೆ ನಿಂದಿಹನೇ ?

[ ಕಾಮ ಬಾಣಹೂಡುವದು ನೋಡುತ್ತ ]

ಬೇಡ. ಬಿಡದಿರು ಮದನಾ! ಆ ಕುಸುಮಬಾಣಗಳ. ಅಲ್ಲಲ್ಲಾ, ಮಸೆದ ಅಲಗುಗಳ ಎಸೆಯದಿರು. ಈ ಅಬಲೆಯೆದೆ ಮಿದುವು. ಮಾಯ ದಂತಹ ಗಾಯ ಮಾಡದಿರು. ಬೇಡುವೆನು, ಬೇಡುವೆನು.

[ಬಾಣ ಎದೆಗೆ ಬಡಿವುದು. ಮಹಾದೇವಿ ಎದೆ ಹಿಡಿದು ಕಡುನೊಂದುಕೊಳ್ಳುವಳು]

ಅಯ್ಯೋ ! ಸೈರಿಸೆನು, ಸೈರಿಸೆನು. ಎಲ್ಲಿರುವೆ ಚೆನ್ನಮಲ್ಲಿಕಾರ್ಜುನ ದೊರೆಯೇ ? ನೀನೆ ಗತಿಯೆಂದು ಸತಿ ನಿನಗೆ ಶರಣು ಬಂದಿಹಳು. ಸೆರೆ-ಬಿಡಿಸಿ ಸಂತೈಸು. ಈ ನೋವ ತೊಡೆದು ಒಡಗೂಡು. ಕಾಮಾರಿ— ಕಾಮಾರಿಯಲ್ಲವೆ ನೀನು ?

[ ಹೋಗುವಳು. ಜಗದಾರಾಧ್ಯ ಬರುವನು. ]

**ಜಗದಾರಾಧ್ಯ**:—ಮಹಾದೇವಿ! ಎಲ್ಲಿರುವ ? ಎಲ್ಲಿರುವನಾದೇವ ? ಅಡವಿಯಲ್ಲಡಗಿಹನೇ ? ಗುಡಿಗಳಲ್ಮಡಗಿಹನೇ ? ಎಲ್ಲಿ ಹುಡುಕುವೆ ತಾಯೆ ? ಅರಿವರಿದು ಭ್ರಮೆದೊರೆದು ನೋಡು. ನೀ ಕಂಡ ಶೃಂಗಾರ ದಾಟ ಮಾಯದ ಮಾಟವೆಂದರಿಕೆಯಾಗುವದು. ತಿರುತಿರುಗಿ ತೊಳಲ ದಿರು—ಬಳಲದಿರು.

**ಕಣ್ಣಿಂಗೆ ಕಾಂಬಡೆ ರೂಪಲ್ಲ । ಕೈಗೆ ಸಿಲುಕುವಡೆ ದೇಹಿಯಲ್ಲ ।**<br>**ನಡೆದಡೆ ಗಮನಿಯಲ್ಲ । ನುಡಿದಡೆ ವಾಚಾಳನಲ್ಲ ।**<br>**ನಿಂದಿಸಿದವಗೆ ಹಗೆಯಲ್ಲ । ಹೊಗಳಿದವಗೆ ಕೆಳೆಯಲ್ಲ ।**<br>**ಗುಹೇಶ್ವರಲಿಂಗದ ನಿಲವನರಿಯಲಚ್ಚರಿಯು ಮರುಳೇ ।**

[ ಹೋಗುವನು. ]

## ಪ್ರವೇಶ ೩

ಸ್ಥಳ:— ರಾಜೋದ್ಯಾನ- ಸಮಯ ಮಧ್ಯರಾತ್ರಿ.

[ತರುಗಳಿವೆ ಮರಗಳಿವೆ. ಹೂಗಿಡ ಹೂಬಳ್ಳಿಗಳು ಹಬ್ಬಿವೆ. ಕಾರಂಜಿಗಳು ಅಲ್ಲಲ್ಲಿ ಕುಣಿಯುತ್ತಿವೆ. ಲತಾಮಂಟಪಗಳು ಹೂಬಿಟ್ಟು ಹಲ್ದಿಗೆಯುತ್ತಿವೆ. ಮಧ್ಯ ಪಲ್ಲೊಂದು ಶಿಲಾ ಮಂಟಪ ಅದಕ್ಕೆ ಹೂಬಳ್ಳಿ ಹಬ್ಬಿಸಿ ಅಂದಗೊಳಿಸಲಾಗಿದೆ. ಮಂಟಪಗಳಲ್ಲಲ್ಲಿ ದೀಪಗಳುರಿಯುತ್ತಿವೆ ಹೂಗಳಿಂದಲಂಕೃತರಾದ ಹೆಂಗಳೆಯರ ಹಿಂಡು, ಅವರೊಡನೆ ಹಾಡಿ ಕುಣಿದು ನಕ್ಕು ನಲಿದಾಡುತ್ತಿರುವ ಪುರುಷರ ತಂಡು ಇವನ್ನೆಲ್ಲ ನೋಡಿದರೆ ವಿಲಾಸಿಗಳಾದ ಅರಸರುಗಳ ವಸಂತೋತ್ಸವವೆಂದು ಹೇಳಬಹುದು. ಒಂದು ಲತಾಮಂಟಪದಲ್ಲಿ ಮಾನಿನಿ ಹೂವಿನೊಡನಾಡುತ್ತ ನಿಂತಿದ್ದಾಳೆ. ಚತುರಿಕೆ ಅವಳ ದೇಹವನ್ನು ಹೂವಿನಿಂದಲಂಕರಿಸುತ್ತಲಿದ್ದಾಳೆ. ಕೌಶಿಕ ದೊರೆ ಮಾನಿನಿ ಇದ್ದ ಲತಾಕುಂಜದ ಮುಂದೆ ಹಾಯ್ದು ಹೋಗುವ ಕಂಚುಕಿ ದಾರಿದೋರುತ್ತಿರುವ. ಮಾನಿನಿ ಅರಸನನ್ನು ನೋಡಿ ಒಯ್ಯಾರದಿಂದೊಮ್ಮೆ ಗೋಣಲುಗಿಸಿ ಹೂವಿನುಂಡೆಯಿಂದೊಗೆಯುವಳು. ಅರಸು ಅತ್ತಿತ್ತ ಆಶ್ಚರ್ಯದಿಂದ ನೋಡತೊಡಗಲು, ಮಾನಿನಿ ಗಟ್ಟಿಯಾಗಿ ನಕ್ಕು ಚಪ್ಪಾಳೆ ತಟ್ಟುವಳು. ಅರಸು ಲತಾಕುಂಜದ ಕಡೆಗೆ ನೋಡಿ ನಗುತ್ತ ಮುಂದಾಗಿ ಮಾನಿನಿಯ ಕೈಹಿಡಿದು ಕಲಕುವನು. ಕಂಚುಕಿ, ಅಲ್ಲಿಯೇ ನಿಲ್ಲುವ. ದಾಸಿ ಲತಾಕುಂಜದಿಂದ ಹೊರ ಬೀಳುವಳು.

**ಕೌಶಿಕ:**— ಯಾರು! ಮಾನಿನಿಯೆ, ಮಾಯಾವಿನಿಯೇ ನೀನು? ಆಹಹಾ! ಏನು ಸೊಬಗಿನ ವೇಷ! ಹೂ ಉಟ್ಟು—ಹೂ ತೊಟ್ಟು, ಹೂ ಮುಡಿದು—ಹೂ ಹಿಡಿದು, ಬೆಡಗು ಮಾಡುವುದ ನೋಡಿ ವನದೇವಿ —ವನದೇವಿಯೇ ಇಂದೆನಗೆ ಒಲಿದು ಬಂದಿಹಳೆಂದು ಭಾಸವಾಯಿತು ನೋಡು.

**ಮಾನಿನಿ:**—ವನದೇವಿ ಒಲಿದು ಬರದೇನು ಮಾಡುವಳು? ನಿಮಗೇನು ಅರಸರಿಗೆ? ದಿನದಿನವು ಎಷ್ಟು ಜನ ದೇವಿಯರು ಒಲಿದು ಬರುವರೋ ಏನೋ. ಮದುವೆಯಾಗಿನ್ನೂ ಮೂರು ದಿನವಾಗಿಲ್ಲ, ಮಾನಿನಿಯ ಮರೆವೆಯಾಯಿತಲ್ಲವೆ ನಿಮಗೆ? ಹೊಸ ಹೆಣ್ಣು ಹಾರೈಸುವಿರಿ?

(ಎಂಬ ವ್ಯಂಗ್ಯೋಕ್ತಿಯನ್ನಾಡಲು ದೊರೆನಕ್ಕು ಗಲ್ಲವ ಹಿಡಿದು ಮುದ್ದು ತೋರುತ್ತ)

**ಕೌಶಿಕ:**— ಹುಚ್ಚು. ಹೆಣ್ಣುಗಳು ಬಲು ಹುಚ್ಚು.

[ಮಾನಿನಿ ಗಲ್ಲದ ಕೈವೆಗೆದು ಕೋಪದಿಂದ]

**ಮಾನಿನಿ:—** ಹುಚ್ಚು. ಹೆಣ್ಣರುಳು ಬಲು ಹುಚ್ಚು. ಹುಚ್ಚಾಗಿದ್ದರೆ ನಿಮ್ಮ ಸವಿಮಾತು ನೆಚ್ಚುತಿದ್ದೆನೆ ನಾನು ? ಮೆಚ್ಚಿ ಮನಗೊಟ್ಟು ಮದುವೆಯಾಗುತಿದ್ದೆನೆ ನಾನು ?

**ಕೌಶಿಕ:—** ಮಾನಿನಿ ! ವಿನೋದವಿಂದೇಕೆ ವಿಪರೀತವೆನಿಸಿತು ನಿನಗೆ ?

**ಮಾನಿನಿ:—** ವಿನೋದವಲ್ಲವೆ ಇದು ? ಅಯ್ಯೋ! ಮದುವೆಗೆ ಮುಂಚಿತವೆ ಎಷ್ಟು ಜನರೆಚ್ಚರಿಸಿದರು. ಅರಸರಿಗೆ ಅರೆಮರವು. ದೊರೆಬುದ್ಧಿ ತಿರುಮುರುವು. ಆ ಮಾತನೆಚ್ಚದಿರು. ವೈಭವಕೆ ಮೆಚ್ಚದಿರೆಂದರು ಆಗ. ಆ ಕೆಟ್ಟ ವಿಧಿಯೆನ್ನನಿಲ್ಲಿಗಟ್ಟಿತು. ಕೆಟ್ಟೆನಕಟಾ ಕೆಟ್ಟೆ.

[ ಮುಖಕ್ಕೆ ಸೆರಗು ಹಿಡಿದು ಮತ್ತೊಂದು ಕುಂಜಕ್ಕೆ ಹೋಗುವಳು ]

**ಕೌಶಿಕ:—** ಇದೇನು ! ಸರಸ ವಿರಸವಾಯಿತೆ ಇಂದು ? ಸಂಶಯ. ಸಂಶಯವನೆ ಹೆಣ್ಣುರೂಪಾಗಿ ಹುಟ್ಟಿಸಿದನೇ ಆ ದೇವ ? ಮಾನಿನಿ ! ಮಾನಿನಿ !!

[ ಹೊರಬಿದ್ದು ಅವಳಿದ್ದ ಲತಾಕುಂಜಕ್ಕೆ ಹೋಗಿ ಹತ್ತಿರ ಕುಳಿತು ]

ನಾನು ಏನೆಂದೆನೆಂದು ಸಂದೇಹ ಮಾನಿನೀ ? ಮಾತನರಿಯದೆ ಮುನಿದುಕೊಳ್ವರೆ ಕಾಮಿನೀ ? ಎನ್ನೆದೆಯಲ್ಲಿ ಇನ್ನಾವ ದೇವಿಗೆಡೆಯಿಲ್ಲ. ವನದೇವಿ ! ವನದೇವಿ !! ನೀನೆನ್ನ ವನದೇವಿ. ನೀನೆನ್ನ ಮನದೇವಿ.

[ ಅವಳ ಮುಖಕ್ಕೆ ಮುತ್ತಿಡಹೋಗುವನು. ಅವಳು ಕೈ ಅಡ್ಡವಾಗಿರಿಸಿ ಮುಖದಿಡುವುತ್ತ ]

**ಮಾನಿನಿ:—** ಸಾಕು, ಸಾಕಿನ್ನು. ಸವಿನುಡಿಯ ಸಕ್ಕರೆಯ ಸುರಿಸದಿರಿ. ಅಕ್ಕರೆಯ ಅಮೃತವನು ಹರಿಸದಿರಿ. ಮಾನಿನಿ ಮರುಳಾಗಲಾರಳು ಮತ್ತೆ.

[ ಎಂದು ನಕ್ಕು ಗಂಭೀರಳಾಗುವಳು. ]

ಹತ್ತಿರಕೆ ಬರಬೇಡಿ. ಮಾನಿನಿಗೆ ಮಿಗಿಲಾದ ಸುಂದರಿಯು ನೋಡಿ. ಅವಳೊಡನೆ ಕೂಡಿ, ಸರಸವನು ಮಾಡಿ.

**ಕೌಶಿಕ:**—ಈ ಸಂಶಯವ ಬಿಡಿಸಲೇನು ಮಾಡಲಿ ನಾನು ? ಎದೆ ಬಿಚ್ಚಿ ಇನ್ನೆಂತು ತೋರಿಸಲಿ ? ನೋಡರಸಿ ! ನೋಡಲ್ಲಿ. ಈ ವಸಂತನ ಹಬ್ಬ ನಿನಗಾಗಿ. ಈ ಎಲ್ಲರುಬ್ಬು ನಿನಗಾಗಿ. ನಿನಗಾಗಿ ಈ ವಿನೋದ. ನಿನಗಾಗಿ ಈ ವೈಚಿತ್ರ್ಯ. ಈ ದೇಹ ನಿನಗಾಗಿ. ಈ ಜೀವ ನಿನಗಾಗಿ. ಕೊರಳಾಣೆ. ಕೊರಳಾಣೆ

[ ಮಾನಿನಿ ಒಮ್ಮೆಲೆ ಕೈಹಿಡಿದು ಹಾಯೆಂದು ಚೀರುವಳು ]

**ಮಾನಿನಿ:**— ಹಾಯ್ !

[ ಕೌಶಿಕ ಗಾಬರಿಯಾಗಿ ಎದ್ದು ]

**ಕೌಶಿಕ:**— ಏನಾಯ್ತು ? ' ಏನಾಯ್ತು ರಮಣಿ ?

**ಮಾನಿನಿ:**—ಅಯ್ಯೋ! ಏನೋ ಕಚ್ಚಿದಂತಾಯ್ತು ಕೈಗೆ. ಸರಸರನೆ ಸದ್ದಾಯ್ತು. ಏನೆಂಬುದನು ನೋಡಿ.

[ ಅವಳ ಕೈಹಿಡಿದು ನೋಡುತ್ತ ]

**ಕೌಶಿಕ:**— ಎಲ್ಲಿ ಕಚ್ಚಿತು ? ಎಲ್ಲಿ ಕಚ್ಚಿತು ?

[ ಮಾನಿನಿ ಅವನ ಕೈ ಕೊಸರಿ ]

**ಮಾನಿನಿ:**— ಏನು ಕಚ್ಚಿತು ನೋಡೆಂದರೆಲ್ಲಿ ಕಚ್ಚಿತೆಂದಾಡುವಿರಿ. ಎಂಥ ಹುಳವದೊ ನೋಡಿ. ಎಲ್ಲಿ ಹೋಯಿತೊ ಓಡಿ. ಇಲ್ಲಿಯೇ ಸರಸರನೆ ಸದ್ದಾಯ್ತು ನೋಡಿ.

[ ಕೌಶಿಕ ಅತ್ತಿತ್ತ ನೋಡುತ್ತ ]

**ಕೌಶಿಕ:**— ಎಲ್ಲಿ ಸದ್ದಾಯ್ತು ? ಇಲ್ಲಿಯೋ ? ಅಲ್ಲಿಯೋ ?

**ಮಾನಿನಿ:**— ಇಲ್ಲಿಯೋ, ಅಲ್ಲಿಯೋ, ಎಲ್ಲಿಯೋ. ಎಲ್ಲಿರುವದೋ ನೋಡೆಂದರೆ, ಇಲ್ಲಿಯೋ ಅಲ್ಲಿಯೋ ಎಂದರೇನು ಹೇಳಲಿ ನಾನು. ಇಷ್ಟರಲ್ಲಿಲ್ಲಿ ಅಡಗಿತೊ ಏನೋ.

[ ಕೌಶಿಕ ಅತ್ತಿತ್ತ ಬೊಗ್ಗಿ ಹುಡುಕಾಡುವ. ಮಾನಿನಿ ಮುಗುಳ್ನಗೆ ನಕ್ಕು ಉದ್ಯಾನದೊಳಗೆ ಓಡಿಹೋಗುವಳು. ]

**ಕೌಶಿಕ:—** ಅಲ್ಲಿಲ್ಲ, ಇಲ್ಲಿಲ್ಲ; ಎಲ್ಲಿ ಹೋಯಿತೊ ಏನೊ.

[ ತಿರುಗಿ ನೋಡಿ ]

ಎಲಾ ! ಮಾನಿನಿ ?

[ ಹೊರಗೆ ನೋಡಲು ಮಾನಿನಿ ನಗುತ್ತ ಅರಸನನ್ನು ಕೈಮಾಡಿ ಕರೆದು ಓಡಿ ಹೋಗುವಳು. ಅರಸು ಮೂಢನಂತಾಗಿ ]

ಏನಿದು ವಿನೋದವೇ ? ನಾನೆಂಥ ಹುಚ್ಚು.

[ ಎಂದು ನಗುತ್ತ ಬೆನ್ನುಹತ್ತುವ ಕಂಚುಕಿ ಹಿಂದೆ ಹೋಗತೊಡಗುವ. ಚತುರಿಕೆ ಅವನನ್ನು ತಡೆಯುವಳು ]

**ಕಂಚುಕಿ:—** ತಡೆಯುವಿಯೇಕೆ ? ಬಿಡು ಬಿಡು, ಚತುರಿಕೇ.

**ಚತುರಿಕೆ:—** ಎಲ್ಲಿ ಹೊರಟೆ ಕಂಚುಕಿ ?

**ಕಂಚುಕಿ:—** ಎಲ್ಲೆಂದರೆ ತಿಳಿಯುವದಿಲ್ಲವೇ ? ಅರಸುದಂಪತಿ-ಗಳಿಗೆ ದಾರಿದೋರಲಿಕ್ಕೆ. ಕಂಚುಕಿಯ ಕೆಲಸವೇನಿರುವದು ಮತ್ತೆ.

**ಚತುರಿಕೆ:—** ಅಯ್ಯೋ ಹುಚ್ಚೇ. ಹಲ್ಲು ಹೋಗಿ, ಬೆನ್ನು ಬಾಗಿ, ಕಣ್ಣು ಕಾಣಿಸದೆ ಸ್ಮಶಾನದ ದಾರಿ ಹಿಡಿದಿರುವಿ. ನೀನೇನು ಪ್ರಣಯದ ದಾರಿದೋರುವೆ ನಿಲ್ಲು.

**ಕಂಚುಕಿ:—** ಅದೇಕೆ ? ನಾನೇನು ಒಂದುಕಾಲಕ್ಕೆ ಹರೆಯದವ ನಾಗಿರಲಿಲ್ಲವೇ ? ನನಗೇನು ಪ್ರಣಯದ ದಾರಿ ಗೊತ್ತಿರಲಿಲ್ಲವೇ ?

**ಚತುರಿಕೆ:—** ಆ ಹರೆ ಹೋಗಿ ಹಳೆ ಮಾತಾಯಿತು. ಆ ದಾರಿ ಬಿಟ್ಟು ಎಷ್ಟು ದಿನವಾಯಿತೋ, ಮರೆತು ಹೋಗಿದ್ದೀತು.

**ಕಂಚುಕಿ:—** (ಉಸುರ್ಗರೆದು) ಈ ಹೆಣ್ಣುಗಂಡಿನ ಆಟ ನೋಡಿ, ಮರೆತದ್ದು ಮತ್ತೆ ನೆನಪಾಗುತ್ತಿದೆ.

**ಚತುರಿಕೆ:—** (ಅಣಕಿಸುವ ಸ್ವರದಲ್ಲಿ) ಮರೆತದ್ದು ಮತ್ತೆ ನೆನ-ಪಾಗುತ್ತದೆ ? ನೆನಪಾಗಿ ಮತ್ತಾರಾದರೂ ಹರೆಯದ ಹೆಂಗಸರ ಕೈಹಿಡಿದು ಕುಣಿಯಹೋದೀ. ಮೈ ಮೆತ್ತಗೆ ಮಾಡಿಬಿಟ್ಟಾರು. ನೆನಪಾಗುತ್ತದಂತೆ. ಮೈ ಮುಪ್ಪಾದರೂ ಮನವು ಸಪ್ಪಾಗಿಲ್ಲವನ್ನು ಇನ್ನೂ ?

**ಕಂಚುಕಿ:—** ಗಿಡ ಮುಪ್ಪಾದರೆ ಹುಳಿ ಮುಪ್ಪಾಗುವದೇನೇ ? ಆಹಹಾ ! ಈ ಸುಖ ಈ ಸ್ವರ್ಗ, ಈ ಆಡುವದು - ಹಾಡುವದು, ಈ ಕುಡಿಯುವದು - ಕುಣಿಯುವದು ನೋಡಿದರೆ ಸತ್ತ ಹೆಣಗಳೂ ಮತ್ತೆದ್ದು ಕುಣಿದಾವು. ನನ್ನಂಥವನ ಪಾಡೇನು ?

**ಚತುರಿಕೆ:—** (ನಗುತ್ತ) ಆ ಸತ್ತ ಹೆಣವೊತ್ತಟ್ಟಿಗಿರಲಿ. ಈ ಜೀವಂತ ಹೆಣವೂ ಕುಣಿಯಬೇಕೆನ್ನುವದೇನು ? ಮಹಾರಾಯಾ ! ಹೆಂಗಸರಾರಾದರೂ ನೋಡಿದರೆ ದೆವ್ವವೆಂದಂಜವನಬಿಟ್ಟು ಓಡಿ-ಹೋದಾರು.

**ಕಂಚುಕಿ:—** ಹಣ್ಣೆಲೆ ನೋಡಿ ಹಸುರೆಲೆ ನಗುತ್ತಿತ್ತಂತೆ. ನಗು. ನಗು ಚತುರಿಕೇ. ನನ್ನನ್ನು ನೋಡಿ' ಈಗ ನೀನು ನಕ್ಕರೆ ನಿನ್ನನ್ನು ನೋಡಿ ಮುಂದಿ ನಗುವ ಕಾಲ ಮುಂದೆ ಬಂದೀತು. ನಾನು ಹರೆಯುದವನಿದ್ದಾಗ ಚತುರಿಕೆ ! ನಿನ್ನಂಥ ಹೊಯ್ಮಾಲೆಯರಾದ ಹುಡಿಗೆಯರು ನನ್ನನ್ನು ಕದ್ದು ನೋಡಿ ಮುದ್ದು ತೋರಿದ್ದುಂಟು. ಕುಣಿಯೋಣ ಬಾರೆಂದು ಬಿದ್ದು ಬೇಡಿಕೊಂಡದ್ದುಂಟು. ಏನು ಮಾಡುವದು ?

**ಚತುರಿಕೆ:—** ಪಾಪ ! ಕದ್ದು ನೋಡಿದವರಲ್ಲಾಗಲಿ, ಬಿದ್ದು ಬೇಡಿಕೊಂಡವರಲ್ಲಾಗಲಿ, ಈ ಮುಪ್ಪಿನಲ್ಲಿ ಕೈಕೊಟ್ಟು ಕುಣಿಯಲು ಒಬ್ಬ ಳಾದರೂ ಇರಬಾರದೇ ?

**ಕಂಚುಕಿ:—** ಹೌದು. ಕೈಕೊಟ್ಟು ಕುಣಿಯಲಿಕ್ಕೆ ನನಗಂತೂ ಈ ಮುಪ್ಪಿನಲ್ಲಿ ಒಬ್ಬಳೂ ಇಲ್ಲಾ. ಆದರೆ ಚತುರಿಕೇ ! ಈ ಹೊಸ ಹರೆ ಯಲ್ಲಿ ಹೆಗಲ ಮೇಲೆ ಕೈಹಾಕಿ ಕುಣಿಯಲು ನಿನಗಾದರೂ ಒಬ್ಬನಿಲ್ಲಾ. ನೀನೇನು ಮಾಡುವೆ ?

**ಚತುರಿಕೆ:—**ನಾನು ಏನಾದರೂ ಮಾಡುವೆ. ನಿನಗೇಕೆ ಅದೆಲ್ಲಾ?

**ಕಂಚುಕಿ:—** ಹಾಗಲ್ಲಾ. ಏನಾದರೂ ಮಾಡುವದಕ್ಕಿಂತ ಈ ಸಂತೋಷ ಸಮಯದಲ್ಲಿ ಹೆಣ್ಣಿಲ್ಲದ ನಾನೊಂದು ಗಂಡು. ಗಂಡಿಲ್ಲದ ನೀನೊಂದು ಹೆಣ್ಣು. ಈ ಎರಡೂ ಇಜ್ಜೋಡಿಗಳು ಜೋಡಾಗಿ, ಕೂಡಿ ಕುಣಿದು ವಿನೋದ ಮಾಡಿದರೆ........

**ಚತುರಿಕೆ:**— ಯಾಕೆ ಕಂಚುಕೀ! ನಾಲಿಗೆ ಬಹಳೇ ಉದ್ದವಾಗಿ ಹರಿಯಹತ್ತಿತು ? ಕುಣಿಯಬೇಕಾಗಿದೆಯಲ್ಲವೇ ? ತಡೆ, ಹಾಗಾದರೆ. ಅರಸು-ಅರಸಿಯರು ಇತ್ತಲೇ ಬಂದರು. ಅವರೆದುರು ಹೇಳಿ ಚನ್ನಾಗಿ ಕುಣಿಸುತ್ತೇನೆ ನಿಲ್ಲು. ಸಲಿಗೆ ನಾಯಿ ತಲೆಗೇರಿತಂತೆ. ಇದೋ ನೋಡಿ. ಮಹಾರಾಜರೇ ! ರಾಣಿಯವರೇ ! ಈ ಕಂಚುಕಿ........

**ಕಂಚುಕಿ:**— ಅಯ್ಯೋ, ಇದೇನುಚತುರಿಕೆ ! ಹೇಳಬೇಡ. ಮಹಾರಾಯಳೇ, ಮುಂದೆಂದೂ ನಿನ್ನ ಹಾದಿಗೆ ಬರುವದಿಲ್ಲ. ಕಾಲು ಬೀಳುತ್ತೇನೆ. ಕ್ಷಮಿಸಿಬಿಡು.

[ಕಾಲಿಗೆ ಬೀಳುವ ಕಂಚುಕಿ. ದಾಸಿ ನಗುವಳು. ಮಾನಿನಿ ಗಿಡಗಿಡಗಳಲ್ಲಿ ಮರೆಯಾಗುತ್ತ ಕಡೆಗೆ ಲತಾಕುಂಜದಲ್ಲಿಗೆ ಬಂದು ಅಡಗುವಳು. ಅರಸು ಅತ್ತಿತ್ತ ನೋಡುತ್ತ, ಹುಡುಕುತ್ತ ಬರುವ. ಕಂಚುಕಿ-ದಾಸಿಯರು ಓಡಿಹೋಗುವರು ]

( ತೆರೆಬೀಳುವದು )

## ಪ್ರವೇಶ ೪

ಸ್ಥಳ:— ರಾಜೋದ್ಯಾನದ ಬೀದಿ. ಸಮಯ- ಮಧ್ಯ ರಾತ್ರಿ.

[ನಿರ್ಮಲ ಭ್ರಮಿಷ್ಟನಂತೆ ದಾರಿಹಿಡಿದಿರುವ. ಕುಮಾರನು ಬೇಸರಿಕೆಯಿಂದ ಹಿಂದೆ ಹೆಜ್ಜೆ ಹಾಕುತ್ತ ಅತ್ತಿತ್ತ ನೋಡಿ ]

**ಕುಮಾರ:**— ಮಾವಾ! ಮಾವಾ!! ದಾರಿ ತಪ್ಪಿದೆ. ದಾರಿತಪ್ಪಿದೆ.

**ನಿರ್ಮಲ:**—(ತಟ್ಟನೆ ನಿಂತು ಅತ್ತಿತ್ತ ನೋಡಿ) ಎಲ್ಲಿ ದಾರಿತಪ್ಪಿದೆ?

**ಕುಮಾರ:**— ಮೊದಲು ಮನೆ ಬಿಡುವಾಗಲೇ ದಾರಿ ತಪ್ಪಿದೆ ಮಾವಾ. ಏನು ಮಾಡುವದು ?

**ನಿರ್ಮಲ:**— ಅಂದರೆ ? ಮಹಾದೇವಿ ಈ ದಾರಿಯಿಂದ ಹೋಗಿ ರಲಿಕ್ಕಿಲ್ಲವೇ ?

**ಕುಮಾರ:**— ಮೊದಲೇ ದಾರಿ ಬಿಟ್ಟವಳಿಗೆ ಈ ದಾರಿ. ಆ ದಾರಿ. ಯಾವ ದಾರಿ ಏನು ಮಾವಾ ?

**ನಿರ್ಮಲ:**— ಹಾಗಾದರೆ ಮತ್ತಾವ ದಾರಿಯಿಂದ ಹೋಗಿರಬೇಕೆ ನ್ನುವಿ ?

**ಕುಮಾರ:**—ಮತ್ತಾವ ದಾರಿಯೆಂದರೇನು ಮಾವಾ? ಅಡ್ಡದಾರಿ.

**ನಿರ್ಮಲ:**— ಎಲ್ಲಿದೆ? ಎಲ್ಲಿದೆ ಆ ಅಡ್ಡದಾರಿ?

**ಕುಮಾರ:**— ಎಲ್ಲಿದೆ ಆ ಅಡ್ಡದಾರಿ! ಇಷ್ಟು ದಿನ ಒಳ್ಳೇ ದಾರಿಯಿಂದ ನಡೆದು ಈ ಮುಪ್ಪಿನ ಕಾಲದಲ್ಲಿ ಮಗಳಿಗಾಗಿ ಅಡ್ಡದಾರಿ ಹಿಡಿದರೆ ಮಂದಿ ಏನೆಂದಾರು ಮಾವಾ ನಿನಗೆ?

**ನಿರ್ಮಲ:**— ಮೂರ್ಖ!

**ಕುಮಾರ:**— ಸರಿ. ಸರಿ. ಈ ಸರಿ ರಾತ್ರಿಯಲ್ಲಿ ಹೆಣ್ಣಿನ ಬೆನ್ನು ಹತ್ತಿ ಹುಚ್ಚರಂತೆ ಅಡ್ಡಾಡುವವರಿಗೆ ಮೂರ್ಖರಲ್ಲದೆ ಬುದ್ಧಿವಂತರೆಂದಾರೇನು ಮಾವಾ?

**ನಿರ್ಮಲ:**— ಹೌದಪ್ಪಾ. ನಿನ್ನನ್ನು ಜೋಡುಮಾಡಿಕೊಂಡು ಮೂರ್ಖನೇ ಏಕೆ ನಾನು ಮಹಾಮೂರ್ಖನಾದೆನು. ಸಾಕು ನಡೆ ಇನ್ನು.

[ ಹೋಗಹತ್ತುವನು ]

**ಕುಮಾರ:**— ಹಾಗೇ ಮುಂದೆ ನಡೆದಿಯಲ್ಲ ಮಾವಾ! ಹಿಂದೆ ಯಾರು ಏನು ಅಂದದ್ದು ಕೇಳುವದಿಲ್ಲವೇ?

[ ನಿರ್ಮಲ ತಿರುಗಿನಿಂತು ಆಶ್ಚರ್ಯದಿಂದ ]

**ನಿರ್ಮಲ:**— ಯಾರು ಏನೆಂದರು?

**ಕುಮಾರ:**— ಯಾರೂ ಏನೂ ಅಂದಿಲ್ಲಾSSS ನಾನೇ ಅಂದೆ ಮಾವಾ.

**ನಿರ್ಮಲ:**— ನೀನು ಏನೆಂದೆ ಅಳಿಯಾ?

**ಕುಮಾರ:**— ಅಲ್ಲಾ. ಮುಂದೆ ಅಡವೆ. ಹಾಗೇ ಎಲ್ಲಿಗೆ ಅಂದೆ?

**ನಿರ್ಮಲ:**—ಹೌದು. ಕಣ್ಣು ಕಾಣುತ್ತವೆ ನನಗೂ. ನಾನು ಅಡವೇ ಬೀಳುತ್ತೇನೆ. ನೀನೇನು ಸುಮ್ಮನೆ ಬೆನ್ನು ಹತ್ತಿ ಬರುವಿಯೋ ಇಲ್ಲವೋ?

**ಕುಮಾರ:**— ಇದೇನು ಮಾವಾ. ಆ ಮಹಾದೇವಿ ತಿಳಿಗೇಡಿ ಹುಡಿಗೆ, ಅರಿಯದೆ ಅಡವೆ ಬಿತ್ತನ್ನು. ತಿಳಿದ ನೀನೂ ಅಡವೆ ಬಿದ್ದರೆ ಹೇಗೆ ಮಾವಾ? ನಾನು ಹೇಗೆ ನಿನ್ನ ಬೆನ್ನು ಹತ್ತಿ ಬರಬೇಕು ಅನ್ನುತ್ತೇನೆ.

**ನಿರ್ಮಲ:**— ಶರಣು, ಶರಣು ಮಹಾರಾಯಾ! ಬಹಳ ಬುದ್ಧಿವಂತನಿರುವಿ; ನನ್ನ ಬೆನ್ನು ಹತ್ತಿ ಬರಬೇಡಾ. ಎಲ್ಲಾದರೂ ಹೋಗು ಕಣ್ಮರೆಯಾಗಿ.

[ ನಿರ್ಮಲ ಹೋಗಹತ್ತುವ. ಕುಮಾರ ದಿಟ್ಟಿಸಿ ನೋಡುತ್ತ ]

**ಕುಮಾರ:**— ಮಾವಾ! ಮಾವಾ!!

[ ನಿರ್ಮಲ ಮಾತಾಡದೆ ಹೋಗುವ ಕುಮಾರ ಅವನ ಕೈಹಿಡಿದು ]

ಮಾವಾ! ಮಾವಾ!! ಮಾತಾಡೊ. ಅಲ್ಲಲ್ಲಾ ಅಲ್ಲಿ ನೋಡು ಅಂದೆ.

**ನಿರ್ಮಲ:**— ಎಲ್ಲಿ ನೋಡಲಿ ಹಾಳಾದ್ದು.

**ಕುಮಾರ:**— ಹಾಳಾದ್ದೇ ಅಲ್ಲಿ ಕಾಣುವದು ನೋಡು ಮಾವಾ.

**ನಿರ್ಮಲ:**— ಎಲ್ಲಿ ಏನು ಕಾಣುವದು? ಮಹಾದೇವಿಯೇ!

**ಕುಮಾರ:**— ಮೊದಲೇ ಮಂಜುಗಣ್ಣು. ಸಂಜೆಯಲ್ಲಂತೂ ತೀರೇ ಹೋಯಿತು.

**ನಿರ್ಮಲ:**— ಕಣ್ಣು ಕಾಣುವದಿಲ್ಲವೇಕೆ? ಎಲ್ಲಿ? ಅಲ್ಲಿಯೇ ಹೌದಲ್ಲೋ? ಕರ್ರಗೆ ಕಾಣುವದು.

**ಕುಮಾರ:**— ಹೌದು. ಹೌದು, ಕಣ್ಣು ಹೋದ ಮೇಲೆ ಕಾಣುವದೆಲ್ಲ ಕರ್ರಗೆ.

**ನಿರ್ಮಲ:**—ಅವಳು ಮಹಾದೇವಿ. ಮಹಾದೇವಿಯೇ ಹೌದೇನು?

**ಕುಮಾರ:**— ಹೌದು ಮಹಾದೇವಿ. ಅವಳೇ ಮಹಾದೇವಿ.

**ನಿರ್ಮಲ:**— ನಡೆ. ಬೇಗ ಹೋಗೋಣ ನಡೆ. ತಡ ಮಾಡಬೇಡ ಕುಮಾರಾ.

**ಕುಮಾರ:**—ಬೆನ್ನು ಹತ್ತಿ ಬರಬೇಡಾ. ಬುದ್ಧಿವಂತನಿರುವಿ ಎಂದು ಅಂದಿದ್ದಿಯಲ್ಲವೇ ಮಾವಾ? ಆದರೆ ನೀನಂದದ್ದನ್ನು ನಾನೇನು ಹಂಗಿಸಿ ತೋರಿಸುವದಿಲ್ಲ. ಪ್ರಸಂಗಕ್ಕೆ ಮೂರ್ಖರೂ ಬೇಕು. ಬುದ್ಧಿವಂತರೂ ಬೇಕು. ಹಾಗೆ ಯಾರನ್ನು ಅಲ್ಲಗಳೆಯಬಾರದು ಮಾವಾ.

[ ನಿರ್ಮಲನು ಅವನನ್ನು ನೋಡಿ ನಕ್ಕು ]

**ನಿರ್ಮಲ:**— ಹೌದಪ್ಪಾ, ಬುದ್ಧೀ ಮಾತು.

**ಕುಮಾರ:**— ಬುದ್ಧೀ ಮಾತಿಗೆ ಸಣ್ಣವರೇನು ದೊಡ್ಡವರೇನು ಮಾವಾ?

[ ಹೋಗುವರು. ]

## ಪ್ರವೇಶ ೫

ಸ್ಥಳ—ರಾಜೋದ್ಯಾನದ ಹೊರಗಿನ ಬೀದಿ.

[ಉದ್ದಾದ ರಾಜೋದ್ಯಾನದ ಗೋಡೆಯ ಮಧ್ಯದಲ್ಲೊಂದು ದೊಡ್ಡ ಬಾಗಿಲು. ಬಾಗಿಲಿನಿಂದೊಳಕ್ಕೆ ನೋಡಲು ಸಾಲಾಗಿ ಹೂವಿನ ಗಿಡಗಳು. ಗಿಡಗಳಲ್ಲಲ್ಲಿ ಅಡ್ಡಾಡಲು ಅಡ್ಡ ದಾರಿಗಳು. ಮಹಾದೇವಿ ತಡವರಿಸುತ್ತ ಅಲ್ಲಲ್ಲಿ ಗೋಡೆಗೆ ಆತು ನಿಲ್ಲುತ್ತ ಬರುವಳು. ಅತ್ತಿತ್ತ ಓಡಾಡಿ ಕಾಲುಗಳು ಸೋತಿವೆ. ಕೂಗಿ ಕೂಗಿ ಧ್ವನಿ ಕುಗ್ಗಿದೆ ನೋಡಿ ನೋಡಿ ಕಣ್ಣು ಜಡವಾಗಿವೆ. ಸೆರಗು ತಲೆಯಿಂದ ಜಾರಿದ್ದರಿಂದ ಕೂದಲು ಗಾಳಿಗೆ ಅಲ್ಲಾಡುತ್ತಿವೆ. ದೇಹವೆಚ್ಚರವಿಲ್ಲ.]

**ಮಹಾದೇವಿ:**— ಚೆನ್ನಮಲ್ಲಿಕಾರ್ಜುನ !........ಚೆನ್ನಮಲ್ಲಿಕಾರ್ಜುನದೇವಾ ! .......ಹುಡುಕಿ........ನಿನ್ನನು ಹುಡುಕಿ....... ನೊಂದಿತೀ ಜೀವಾ........ಏಕೆ?........ಏಕಿಷ್ಟು........ಎನ್ನ ನೊಂಚಿಸುವೆ?........ಏನು? ........ಏನಿದೆಲ್ಲ........ಎನ್ನ ಸಂಚಿತವೇ ? ನಿನ್ನ........ಧರ್ಮ !........ ನಿನ್ನ........ಧರ್ಮವಲ್ಲವೇ ! ........ಎನ್ನ........ಕಾಯ್ವುದು........ನನ್ನ ಕರ್ಮ !........ನನ್ನ........ಕರ್ಮವೇ !........ನಿನ್ನ........ಕಾಣದೆ........ ಸಾಯ್ವುದು........ಸಾಯ್ವುದು........ಸಾಯ್ವುದು........ಸಾಯ್ವುದು.

[ ಮಹಾದೇವಿಯು ಬಾಗಿಲದೆದುರಿನಲ್ಲಿಯೇ ಮೂರ್ಛಿತಳಾಗಿ ಬೀಳುವಳು. ಮಾನಿನಿ ನಗುತ್ತ, ಹಿಂದೆ ನೋಡುತ್ತ ಓಡಿಬಂದು, ಬಾಗಿಲಿನ ಹತ್ತರದ ಗಿಡಗಳಲ್ಲಿ ಮರೆಯಾಗುವಳು ಕೌಶಿಕ ಅವಳ ಬೆನ್ನುಹತ್ತಿ ಬರುವಾಗ (ಅವನೂ ನಗುತ್ತಿರುವ) ಮಹಾದೇವಿ ಬೀಳುವದು ನೋಡಿ ತಟ್ಟನೆ ನಿಂತು ]

**ಕೌಶಿಕ:**— ಯಾರು ! ಯಾರು ಬಿದ್ದವರೆಡವಿ ? ಮಾನಿನಿಯೇ !

[ ಅವಸರದಿಂದ ಮುಂದೆ ಬಂದು ನಿಂತು ನೋಡುತ್ತ ]

ಛೇ ! ಮಾನಿನಿಯಲ್ಲಿ. ಮತ್ತಾವಳೀ ಅಬಲೆ ? ಏಕಾಕಿಯಾಗಿವಳು ಅಲೆಯುತಿಹಳೇಕೆ ?

[ ಸುತ್ತುಮುತ್ತು ನೋಡುತ್ತ ]

ಸಂಗಡಿಗರಾರಿಲ್ಲ. ಏನು ಕಷ್ಟವೊ ಕಾಣೆ.

[ ಬೆನ್ನುಹಿಂದಿನಿಂದ ಬೊಗ್ಗಿ ಅವಳ ಮುಖ ನೋಡುತ್ತ ]

ಆಹಹಾ ! ಏನು, ಏನಿದು ದಿವ್ಯ ರೂಪ !

[ ವಿಕಾರವಶನಾಗಿ ಉಸುರ್ಗರೆದು ]

ಯಾವನೊರಿಸಿಹನೊ ಭೂಪ !

[ ಮುಖವನ್ನೇ ಬಿಡದೆ ನೋಡುತ್ತ ]

ಕುಂಕುಮದ ಕಲೆಯಿಲ್ಲ ಹಣೆಯಲ್ಲಿ. ಈ ಹೂವನಾರೂ ಹಿಡಿದಿಲ್ಲ. ಆ ಭಾಗ್ಯವನಾರೂ ಪಡೆದಿಲ್ಲ.

[ಆತುರದಿಂದ ನೆಲಕ್ಕೆ ಮಂಡೆಯೂರಿ ನಡಕ್ಕೆ ಕಟ್ಟಿದ ವಸ್ತ್ರಬಿಚ್ಚಿ ಗಾಳಿ ಹಾಕ ತೊಡಗುವನು.]

ಅಯ್ಯೋ ! ರಸಿಕರು ಮುಡಿದು ಮೂಸಿನೋಡುವ ಮೊದಲೆ, ಈ ಹೂವು ಹುಡಿಯಲಿ ಬಿದ್ದು ಬಾಡುತಿಹುದಲ್ಲಾ ! ತಡೆಯೆ; ತಡೆಯೆನಾನಿನ್ನು. ಇದನೆತ್ತಿ ಎದೆಯಲಿರಿಸುವೆನು. ಶಿರದಿ ಧರಿಸುವೆನು.

[ಅವಳನ್ನು ಅಪ್ಪಿಕೊಳ್ಳಬೇಕೆನ್ನುವದರೊಳಗೆ ಗಿಡದಿಂದ ಹಣ್ಣೊಂದು ನೆಲಕ್ಕೆ ಹಾಸಿದ ಎಲೆಗಳ ಮೇಲೆ ಬಿದ್ದು ಪಟ್ಟೆಂದು ಸಪ್ಪಳವಾಗುವದು. ಕೌಶಿಕ ಕೈ ಹಿಂತೆಗೆದು ಗಾಬರಿಯಿಂದ ಅತ್ತಿತ್ತ ನೋಡುತ್ತ]

ಸುತ್ತಾರ ಸುಳುವಿಲ್ಲ. ಮತ್ತೇನು ಸಪ್ಪಳವು ?

[ ಹತ್ತರದಲ್ಲಿಯೇ ಬಿದ್ದ ಹಣ್ಣನ್ನು ನೋಡಿ ನಕ್ಕು ]

ಗಿಡದಿಂದ ಹಣ್ಣುದುರಿ ಎನ್ನ ಹೆದರಿಸಿತೇ ? ಸ್ವರ್ಗಸುಖದಿಂದೆನ್ನ ಚದುರಿಸಿತೇ ?

[ಹಣ್ಣನ್ನು ಕೈಯಲ್ಲಿ ತಕ್ಕೊಂಡು ನೋಡತೊಡಗುವ. ಮಹಾಸಿನಿ ಗಿಡದಿಂದ ಹೊರಬಂದು ಈ ದೃಶ್ಯನೋಡಿ ತಟ್ಟನೆ ನಿಂತು ಆಶ್ಚರ್ಯಗೊಂಡವಳಂತೆ ಬಾಯಮೇಲೆ ಕೈಯಿಡುವಳು.]

ಹಣ್ಣು, ಹಣ್ಣು ಹೆಣ್ಣನು ನೋಡಿ ತಣ್ಣಗಿರುವವರಾರು? ಮದುವೆ, ಮದುವೆಯಾಗುವ ಮೊದಲು, ಕನ್ಯೆಯುರ ಕೈಹಿಡಿಯಲನ್ಯಾಯವೇನು ?

ಯಾರ ವಸ್ತುವೆಂಬುದು ಗೊತ್ತಾಗದಿರಲು, ಅದು ಆ ನಾಡಿನರಸನ ಸೊತ್ತಾಗುತಿಹುದು. ಹೆದರಲೇತಕೆ ಇನ್ನು ? ಮನಕೊಪ್ಪಿದೀ ಸುಂದರಿಯ ಅಪ್ಪುವೆನು. ಯಾರು - ಯಾರು ನೋಡೇನು ಮಾಡುವರು ? ನಾಡೊಡೆಯ ನಾನಿರಲು.

( ಅಪ್ಪಹೋಗುವ. ಜಗದಾರಾಧ್ಯ ಅವಸರವಾಗಿ ಬರುತ್ತ )

**ಜಗದಾರಾಧ್ಯ:**— ಬೇಡಬೇಡೀ ಅವಿಚಾರ. ತರವಲ್ಲ, ಬಿಡು ಬಿಡೀ ವ್ಯಭಿಚಾರ.

( ಕೌಶಿಕ ಕೈತೆಗೆದು ಎದ್ದುನಿಂತು ಸಂತಾಪದಿಂದವನನ್ನು ನೋಡುವ)

**ಮಾನಿನಿ:**— ಏನಿದು ! ಏನಿದನ್ಯಾಯ. ನೋಡೆ ಇದನೋಡೆ ನಯ್ಯೋ.

( ಮಾನಿನಿ ಆಸೂಯೆ ಅಸಮಾಧಾನಗಳಿಂದ ನಡುಗಿ ಕಣ್ಮುಚ್ಚಿ ಗೋಡೆಗಾನು ವಳು. ಕೌಶಿಕ ಆಶ್ಚರ್ಯದಿಂದತ್ತ ತಿರುಗಲು ಮಾನಿನಿಯು ನೋಡಿ, ಭೀತಿಯಿಂದ ಮನಕುಗ್ಗಿ ನಾಚಿಕೆಯಿಂದ ತಲೆ ತಗ್ಗಿಸುವನು. )

**ಜಗದಾರಾಧ್ಯ:**—ಯಾರು ನೀನೆಲವೋ? ಯಾರು ನೀ: ನಾಡರಸ. ಕೌಶಿಕ. ಏನು ! ನೀನಿಂಥ ಕೇಡಿಗನೇ ?

( ಕೌಶಿಕ ತಟ್ಟನೆ ಮುಖವೆತ್ತಿ ಅಭಿಮಾನ - ಸಂತಾಪಗಳಿಂದ )

**ಕೌಶಿಕ:**— ಯಾರು ! ಕೇಡಿಗರಾರು ? ಈ ಅಬಲೆಯ ದುಃಖವ ನೋಡಿ, ಕರುಣೆಯಿಂ ಕಾಪಾಡಲೆಂದೋಡಿಬಂದವ ನಾನು ಕೇಡಿಗನೇ ?

( ಮಾನಿನಿ ಧಾವಿಸಿ ಕೌಶಿಕನ ಹತ್ತರ ಬಂದು ದೈನ್ಯದಿಂದ )

**ಮಾನಿನಿ:**— ಹಾ ನಾಥ ! ಮಹಾಪುರುಷನೆದುರಿರಲು, ಮಾಡಿದ ಪಾಪವನು ಅಡಿಬಿಡುವುದು ಲೇಸು. ಬೇಡಿನಿಯ ! ಸುಳ್ಳಾಡಬೇಡಿಲ್ಲಿ ಬೇಡುವೆನು. ಸುಳ್ಳಾಡಿ ಪಾಪವನು ಕೊಳ್ಳದಿರು. ಹೇಳು; ಅಬಲೆಯ ದುಃಖವ ನೋಡಿ ಕರುಣೆ ಉಕ್ಕಿತೇ ? ಸುಂದರಿಯ ಮುಖ ನೋಡಿ ಮೋಹ ಮಿಕ್ಕಿತೆ ಹೇಳು ? ಸತ್ಯವನು ಹೇಳಿದರೆ ಕ್ಷಮಿಸುವನು ಗುರುದೇವ.

( ಕೌಶಿಕ ಕಿಡಿಕಿಡಿಯಾಗಿ ಮಾನಿನಿಯು ನೋಡುತ್ತ )

**ಕೌಶಿಕ:**— ಮಾನಿನಿ ! ( ನೂಕಿಬಿಡುವ. )

**ಜಗದಾರಾಧ್ಯ:—** ಅರಸೇ ! ಇಂಥ ದಿವ್ಯ ಮಡದಿಯ ಪಡೆದು ಧನ್ಯ ನೀನಾಗಿರಲು, ಅನ್ಯ ಹೆಣ್ಣನು ಬಯಸಿ ಮಣ್ಣಾಗೂಡುವಿಯೇಕೆ ? ಕೇಳು, ಕೇಳೀ ದೇವಿ ಮಹಾದೇವಿ. ಸಾಮಾನ್ಯಳೆಂದೆನಬೇಡ. ಅಲೌಕಿಕವು ಇವಳೀ ಮೂರ್ತಿ. ನಿನ್ನ ರಾಜ್ಯಕೆ ಘನವಾದ ಕೀರ್ತಿ.

(ಮಹಾದೇವಿ ಅಲುಗಾಡಿ ಮೆಲ್ಲಗೆ "ಚೆನ್ನಮಲ್ಲಿಕಾರ್ಜುನ" ನೆಂದು ಕರೆವಳು. ಜಗದಾರಾಧ್ಯ ಅವಳ ಹತ್ತಿರ ಹೋಗಿ ವಾತ್ಸಲ್ಯದಿಂದ ತಲೆ ಸವರುತ್ತ)

ಮಹಾದೇವಿ ! ಮಹಾದೇವಿ ! ಎಚ್ಚರಾಗು. ಎಚ್ಚರಾಗೌ ತಾಯೆ. ಏನು ! ಇನ್ನೂ ಬಿಡದಿಹುದೆ ಮಾಯೆ ?

( ಕೌಶಿಕ ತಲೆ ತಗ್ಗಿಸಿಕೊಂಡು ಉದ್ಯಾನವೊಳಕ್ಕೆ ಹೋಗುವ. ಮಾಸಿನಿ ಹಿಂಬಾಲಿಸುವಳು ಜಗದಾರಾಧ್ಯ ಪಧ ಹೇಳುವ )

ಕಂಡೆನೆಂಬುದು ಕಣ್ಣಿಗೆ ಮರವೆ । ಕಾಣೆನೆಂಬುದು ಮನಕ್ಕೆ ಮರವೆ । ಕೂಡಿದೆನೆಂಬುದು ಅರುವಿನ ಮರವೆ । ಅಗಲಿದೆನೆಂಬುದು ಮರವಿನ ಮರವೆ । ಕಂಡೆನು-ಕಾಣೆನು ಕೂಡಿದೆ-ಅಗಲಿದೆನೆಂಬುದ ಬಿಡಲು । ಎಲ್ಲೆಲ್ಲಿಯು ಅಲಿಂಗವೆ ಮರುಳೆ ।

(ಮಹಾದೇವಿ ನಿದ್ರೆಯಿಂದೆಚ್ಚರಿಯುವಂತೆಎದ್ದು ಕುಳಿತುಕೊಳ್ಳುತ್ತ)

**ಮಹಾದೇವಿ:—** ಯಾರು ! ಯಾರೆನ್ನ ನೆಚ್ಚರಿಸಿದರು ? ಮಾಯೆಯ ಹಿಡಿಯಿಂದ ಬಿಡಿಸಿದವರಾರೆನ್ನ ?

[ ಕಣ್ದೆರೆದು ಸುತ್ತು ನೋಡುತ್ತ ಅನಂದಾತಿರೇಕದಿಂದ ]

ಅಹಹಾ! ಏನು ಏನಿದು ಚೆನ್ನಮಲ್ಲಿಕಾರ್ಜುನ, ನಿನ್ನ ದಿವ್ಯ ಮಂಗಲ ರೂಪ ! ವನವಾಗಿ—ವನದೊಳಗಿನ ತರುವಾಗಿ—ಮರವಾಗಿ ನೀನಿರುವೆ. ಹೂವಾಗಿ ನೀನಿರುವೆ. ಹಣ್ಣಾಗಿ ನೀ ಮೆರೆವೆ. ಗಿರಿಯಾಗಿ ನೀನಿರುವೆ. ತೊರೆಯಾಗಿ ನೀ ಹರಿವೆ. ಈ ಭೂಮಿ ವ್ಯೋಮಗಳೆಲ್ಲ ನೀನೆ ನೀನೇ. ನೀನಿಲ್ಲದೆಲ್ಲಿಯೂ ಇಲ್ಲಾ. ನೀನಲ್ಲದಾವುದು ಇಲ್ಲಾ. ಎಲ್ಲಿ ನೋಡಿದಡಲ್ಲಿ ನೀನೆ ದೇವಾ.

**ಜಗದಾರಾಧ್ಯ:—** ಮಂಗಲವು. ಮಂಗಲವು ಮಹಾದೇವಿ.

[ ಆಶೀರ್ವದಿಸುವ. ಮಹಾದೇವಿ ತಿರುಗಿ ನೋಡಿ ಅನಂದಾತಿಶಯದಿಂದ ಪಾದಕ್ಕೆರಗುವಳು. ]

**ಮಹಾದೇವಿ:—** ನಿನ್ನ ದಯೆ ಗುರುದೇವ! ನಿನ್ನ ದಯೆ.

[ ಜಗದಾರಾಧ್ಯ ಅವಳನ್ನಪ್ಪಿ ಮುಂಡಾಡುತ್ತ ]

**ಜಗದಾರಾಧ್ಯ:—** ಇಂದೆನಗೆ ಆನಂದ. ಆನಂದ.

[ನಿರ್ಮಲ—ಕುಮಾರರು ಬರುವರು. ಜಗದಾರಾಧ್ಯ, ಮಹಾದೇವಿಯನ್ನು ಅಪ್ಪಿರುವದನ್ನು ನೋಡಿ ಕುಮಾರನು ಸಂತಾಪದಿಂದ]

**ಕುಮಾರ:—** ಮಾವಾ! ನೋಡು—ನೋಡು. ಈ ಅಯ್ಯನ ಅನಾಚಾರ ನೋಡಬಾರದೇ? ನೀಚ ಜಂಗಮಾ! ನಿನ್ನನ್ನು ಈಗಲೆ ತುಂಡರಿಸಿ ಚಲ್ಲುತಿದ್ದೆ. ಕೈಯಲ್ಲಿ ಅಸ್ತ್ರ-ಶಸ್ತ್ರ-ಮಹಾಸ್ತ್ರಗಳೇನೂ ಇಲ್ಲಾ. ಆದರೂ ನಿಲ್ಲು ನಿರ್ಲಜ್ಜಾ. ಕೈಯಿಂದ ಗುದ್ದಿ ಒಂದೇ ಏಟಿಗೆ ನಿನ್ನನ್ನು ಕೈಲಾಸಕ್ಕೆ ಕಳಸಿ ಬಿಡುತ್ತೇನೆ ನಿಲ್ಲು.

[ ಹೊಡೆಯಹೋಗಲು ನಿರ್ಮಲನು ತಡೆದು ಸಿಟ್ಟಿನಿಂದ ]

**ನಿರ್ಮಲ:—** ಭ್ರಷ್ಟಾ! ಏನಿದು?

[ಮಹಾದೇವಿ-ಜಗದಾರಾಧ್ಯರು ಅಗಲಿ ಅವರನ್ನು ನೋಡುವರು ಕುಮಾರ ಬೆಪ್ಪನಂತಾಗಿ]

**ಕುಮಾರ:—** ಹಾ! ಯಾರು? ಯಾರು ಭ್ರಷ್ಟರು ಮಾವಾ? ಅರುಮರುವಾಯಿತೇನು? ನಾನೋ ಏನು ಈ ಜಂಗಮನೊ ಭ್ರಷ್ಟ? ಹೀಗೇಕೆ ಮಾಡುವಿ ಮಾವಾ?

**ನಿರ್ಮಲ:—** ನೀನೇ—ನೀನೇ ಭ್ರಷ್ಟ.

**ಕುಮಾರ:—** ನಾನೇ ಭ್ರಷ್ಟ? ಅಂದರೆ ಈ ಜಂಗಮ ಶ್ರೇಷ್ಠನೇನು? ಹೆಣ್ಣೋಡಿಸಿಕೊಂಡು ಹೋಗಿ, ಅಡವಿಯಲ್ಲಿ ಅಪ್ಪಿ ಆಲಿಂಗಿಸುತ್ತಿರುವವನು ಶ್ರೇಷ್ಠ. ಒಳ್ಳೇ ನ್ಯಾಯ.

**ನಿರ್ಮಲ:—** ಎಲಾ ದುಷ್ಟಾ! ಗುರುನಿಂದೆ ಮಾಡುವಿಯಾ? ಶಿವ ಶಿವ!

**ಕುಮಾರ:—** ತೀರೇ ಹೋಯಿತು. ಗುರುನಿಂದೆ. ಮಳ್ಳಶಿಷ್ಯ ಕಳ್ಳಗುರು, ಒಳ್ಳೇ ಜೋಡು.

ನಿರ್ಮಲ:— ಹೆಚ್ಚು ಬೊಗಳಬೇಡಾ.

ಕುಮಾರ:— ಬೊಗಳದೆ ಇಂಥವರನ್ನು ಹೊಗಳಬೇಕೇನು ಮಾವಾ ?

ನಿರ್ಮಲ:— ಸಾಕು ಬಾಯ್ಮುಚ್ಚು.

ಕುಮಾರ:— ನಮ್ಮಂಥವರು ಬಾಯ್ಮುಚ್ಚಿದ್ದರಿಂದಲೆ ಇಂಥ ಕಳ್ಳ ಗುರುಗಳ ಚಲ್ಲಾಟ ಹೆಚ್ಚಿತು.

ನಿರ್ಮಲ:— ಮೂರ್ಖಾ !

ಕುಮಾರ:— ಸತ್ಯ ಮಾತಾಡುವವರೆಲ್ಲಾ ಮೂರ್ಖರು. ಕಲಿ-ಕಾಲ ಮಹಿಮೆ. ನೀನೇನು ಮಾಡೀ ಮಾವಾ ?

ನಿರ್ಮಲ:— ನಮಸ್ಕರಿಸುವೆನು ಗುರುದೇವ.

[ ನಿರ್ಮಲನು ಜಗದಾರಾಧ್ಯನ ಕಾಲಿಗೆ ಬೀಳುವನು. ]

ಕುಮಾರ:— ನಿಮಗೆಲ್ಲರಿಗೂ ಇಲ್ಲಿಂದಲೇ ದೀರ್ಘದಂಡ ನಮಸ್ಕಾರ.

[ ಮೊದಲನೆ ಅಂಕವು ಮುಗಿದುದು ]

# ಅಂಕ ೨

## ಪ್ರವೇಶ ೧

ಸ್ಥಳ—ರಾಣಿವಾಸ. ಸಮಯ—ಮುಂಜಾವು.

[ಮಾನಿನಿ ಮಂಚದ ಮೇಲೆ ಮಲಗಿ ತಲೆದಿಂಬಿಗೆ ಗಲ್ಲವನ್ನಿಟ್ಟು ನೆಲ ನೋಡುತ್ತ ಕಣ್ಣೀರುದುರಿಸುತ್ತಲಿದ್ದಾಳೆ. ಪಕ್ಕದಲ್ಲಿ ತಾಂಬೂಲದ ತಟ್ಟೆ, ಸುಗಂಧದ್ರವ್ಯದ ಬಟ್ಟಲಗಳೂ, ಹೂವುಗಳೂ ಇರುವವು. ಕೆಳಗೆ ಬೇರೊಂದು ಆಸನವಿದ್ದು, ಅದರ ಬದಿಯಲ್ಲಿ ವೀಣೆ-ಮೃದಂಗಾದಿ ಸಂಗೀತದ ಸಾಹಿತ್ಯಗಳಿವೆ. ಗೋಡೆಗೆ ಅಲ್ಲಲ್ಲಿ ಚಿತ್ರಪಟಗಳೂ, ನಿಲುಗನ್ನಡಿಗಳೂ ಇರುವವು. ಪಕ್ಕಲುಗೋಡೆಯಲ್ಲಿ ಒಂದು ಬಾಗಿಲವಿದ್ದು ಅದನ್ನು ತೆರೆಯಿಂದ ಮರೆಮಾಡಲಾಗಿದೆ. ಚತುರಿಕೆ ಮಂಚಕ್ಕೆ ಕೈಯಿಟ್ಟು ಮಾನಿನಿಗೆ ಗಾಳಿಹಾಕುತ್ತ ನಿಂತಿದ್ದಾಳೆ. ಬಾಗಿಲದ ತೆರೆ ಓರೆಮಾಡಿ ದಾಸಿಯೋರ್ವಳು ಕೈಯಲ್ಲಿ ನೀರಿನ ಕಲಶ, ಹರವಾದ ಬಾಯಿಯ ಪಾತ್ರೆ ಹಿಡಿದುಕೊಂಡು ಬಂದು ವಿನಯದಿಂದ ಪ್ರಣಾಮ ಮಾಡುತ್ತ]

**ಮೊ. ದಾಸಿ:**— ಮಹಾರಾಣಿಯವರಿಗೆ ಜಯವಾಗಲಿ. ನೀರು.

[ ಮಾನಿನಿ ಮುಖವೆತ್ತಿ ದಾಸಿಯನ್ನು ನೋಡುತ್ತ ಕರುಣಾರ್ದ್ರಸ್ವರದಿಂದ ]

**ಮಾನಿನಿ:**— ಕಣ್ಣೀರು ಕಾಲುವೆಯಾಗಿ ಹರಿಯುತಿರಲಿಲ್ಲಿ, ಬೇರೆ ಈ ನೀರೇಕೆ ?

[ಮಾನಿನಿ ಮೊದಲಿನಂತೆ ಮಲಗುವಳು. ದಾಸಿ ಏನೂ ತೋಚದೆ ನಿಲ್ಲುವಳು. ಚತುರಿಕೆ ಅವನ್ನಿಟ್ಟುಹೋಗೆಂದು ಸನ್ನೆ ಮಾಡುವಳು. ದಾಸಿ ಕಲಶಪಾತ್ರೆಗಳನ್ನು ಇಟ್ಟು ಪ್ರಣಾಮ ಮಾಡಿ ಹೋಗುವಳು. ಮತ್ತೊಬ್ಬ ದಾಸಿ ಕೈಯಲ್ಲಿ ಉಡುಪಿನ ತಟ್ಟೆ ಹಿಡಿದುಕೊಂಡು ಬಂದು ವಿನಯದಿಂದ ಪ್ರಣಾಮ ಮಾಡಿ]

**ಎ. ದಾಸಿ:**—ಮಹಾರಾಣಿಯವರಿಗೆ ಜಯವಾಗಲಿ. ಉಡುವ ವಸ್ತ್ರ.

[ ಮಾನಿನಿ ಮತ್ತೆ ಮುಖವೆತ್ತಿ ದಾಸಿಯನ್ನು ಸಿಟ್ಟಿನಿಂದ ನೋಡುತ್ತ ]

**ಮಾನಿನಿ:**— ಉಡುವ ವಸ್ತ್ರಗಳಲ್ಲಿವು. ಮೈಗೆ ನಡುವ ಶಸ್ತ್ರಗಳು. ಇವನ್ನು ನಿನಗಾರು ತರಹೇಳಿದರು ?

[ ದಾಸಿ ಮಾನಿನಿಯನ್ನೇ ನೋಡುತ್ತ ತೊದಲುನುಡಿಯಲ್ಲಿ ]

**ಎ. ದಾಸಿ:**— ಯಾರೂ- ಯಾರೂ ಹೇಳಲಿಲ್ಲ ಮಹಾರಾಣಿಯವರೇ ! ನಾನೇ ದಿನದಂತೆ....

[ಚತುರಿಕೆ ನಡುವೆ ಬಾಯಿಹಾಕಿ, ದಾಸಿಗೆ]

**ಚತುರಿಕೆ:**— ದಿನದಂತೆ ಇಂದಿನ ದಿನವಲ್ಲವೆಂಬುದು ಇಷ್ಟೂ ತಿಳಿಯಲಿಲ್ಲವೆ ?

**ಎ. ದಾಸಿ:**— ಅದಾವುದೂ ಗೊತ್ತಾಗಲಿಲ್ಲ ಬಿಡು. ಚತುರಿಕೆ ! ಇವನೊಯ್ದು ಬೇರೆ ತರಲೇನು ? ತೆಳ್ಳಗಿನವು, ಬೆಳ್ಳಗಿನವು, ಬಣ್ಣದವು, ಕಣ್ಣಿನವು....

**ಚತುರಿಕೆ:**--ಸಾಕು, ಸಾಕು. ಮತ್ತೇನು ಬೇರೆ ತರುವಿ! ಇದ್ದವನ್ನೇ ಇಟ್ಟು ಎದ್ದು ಹೋದರಾಯಿತು, ಅದಕೆಷ್ಟು ಮಾತಾಡುವಿಯೋ ನೀನು ?

[ದಾಸಿ ಚತುರಿಕೆಯನ್ನು ಕಟ್ಟುಗಣ್ಣಿನಿಂದ ನೋಡುತ್ತ, ಸಿಟ್ಟಿನಿಂದ ತಟ್ಟೆಯನ್ನಿಟ್ಟು ಬಾಯಲ್ಲಿ ವಟಗುಟ್ಟುತ್ತ ಹೋಗುವಳು. ಚತುರಿಕೆ ಮುಂದೆ ಬಂದು]

ಮಹಾರಾಣಿ ! ಇದು ನೋಡಿ ಹೊತ್ತು.

**ಮಾನಿನಿ:**— (ಮಲಗಿದಲ್ಲಿಯೇ) ಅನ್ಯರ ಸುಖ ದುಃಖ, ಅದಕೇನು ಗೊತ್ತು ಚತುರಿಕೆ ?

**ಚತುರಿಕೆ:**— (ಕೆಲಕಾಲ ಸುಮ್ಮನಿದ್ದು) ಮಹಾರಾಣಿ........

**ಮಾನಿನಿ:**—(ಅಸಮಾಧಾನದಿಂದೇಳುತ್ತ) ಮಹಾರಾಣಿ, ಮಹಾರಾಣಿ. ಚತುರಿಕೆ, ಇನ್ನೊಮ್ಮೆ ಮಹಾರಾಣಿಯೆಂದರೆ ನಿನಗೆನ್ನ ಕೊರಳಾಣೆಯಾಗಿದೆ ನೋಡು.

**ಚತುರಿಕೆ:**— ಇದೇನು ದೇವಿ ! ಎಷ್ಟು ಜನ್ಮದ ಪುಣ್ಯಬಲದಿಂದಲೋ ಏನೋ, ನಿನಗೀಗ ಮಹಾರಾಣಿ ಪದವೆ ಸಿಕ್ಕಿದೆ. ಹೀಗೇಕೆ ಮಾಡುವಿ ?

**ಮಾನಿನಿ:**— ಈ ಮಹಾರಾಣಿ ಪದವೆ ಬಂದುದೆನ್ನ ಪುಣ್ಯದ ಬಲವೊ, ಪಾಪದ ಫಲವೊ ಗೊತ್ತಾಗದಿದು ಎನಗೆ. ಆಯ್ತಾಯ್ತು, ಪದವೆಗೆ ಎನ್ನ ಮದುವೆಯಾದಂತಾಯ್ತು.

**ಚತುರಿಕೆ:**— ಇಷ್ಟು ಸಣ್ಣ ಮಾತಿಗೆ ಹೀಗೆ ಎದೆಗುಂದಿದರೆ ಹೇಗೆ ದೇವಿ ?

**ಮಾನಿನಿ:—** ಚತುರಿಕೆ! ಪತಿಯು ಮತ್ತೊಬ್ಬಳಲಿ ಮನವಿಡುವನೆಂಬುದು, ಹೆಣ್ಣಿಗಿದು ಸಣ್ಣ ಮಾತೇನೇ ? ಎದೆಗುಂದದೇನು ಮಾಡಲಿ ನಾನು ?

**ಚತುರಿಕೆ:—** ಸುಮ್ಮನೆ ಸಂಶಯಕ್ಕೊಳಗಾಗಿ, ದುಃಖಿಸುವದು ಒಳಿತಲ್ಲ ದೇವಿ.

**ಮಾನಿನಿ:—** ಸಂಶಯವೇ ? ಚತುರಿಕೆ! ಆ ಮಹಾದೇವಿಯನು ಕಂಡಾಗಿನಿಂದರಸು, ಎನ್ನೊಡನೆ ಮನಬಿಚ್ಚಿ ಮಾತನಾಡದೆ ಇಹನು. ಮಾತನಾಡಿಸಿದರವನು, ಮೌನದಲಿ ಮುಖದಿರುವುತಿಹನು. ಹತ್ತಿರಕೆ ಹೋದರವನತ್ತ ಸರಿಯುವನು, ಮುಟ್ಟಿದರೆ ಮೆಟ್ಟಿಬೀಳುವನವನು. ಹೀಗಿರಲು ಎನ್ನ ದುಃಖಕೆ ಕಾರಣವು, ಸಂಶಯವೆ ನಿಶ್ಚಯವೆ ನೀನೆ ಹೇಳು.

**ಚತುರಿಕೆ:—**ಇಷ್ಟಕ್ಕೆ ನಿರಾಶರಾಗಬೇಡಿ ದೇವೀ ! ಇನ್ನೂ........

**ಮಾನಿನಿ:—** ಇನ್ನೇನು ? ಆಶೆಯಳಿದಮೇಲುಳಿವುದಿನ್ನೇನು ? ನಿರಾಶೆಯಲ್ಲವೆ ಚತುರಿಕೇ ?

**ಚತುರಿಕೆ:—**ಗಂಡಹೆಂಡರ ನಡುವೆ, ಜೀವನದಲ್ಲಿ ಇಂಥ ಪ್ರಸಂಗಗಳು ಎಷ್ಟೋ ಬಂದು ಹೋಗುವದುಂಟು. ಈಗಾಗಲೆ ನಿರಾಶೆಯೆಂದು ಹೇಗೆ ಹೇಳುವಿ ದೇವೀ ?

**ಮಾನಿನಿ:—** ಚತುರಿಕೆ ! ಹೆಣ್ಣಿಗೆ ಜೀವನದೊಂದಾಶೆಯೆಂದರೆ ಪ್ರೇಮ. ಒಂಬತ್ತು ತಿಂಗಳು ಹೊತ್ತುಹಡೆದು, ಎತ್ತಿಮುದ್ದಿಸಿ, ಹಾಡಿ—ಆಡಿಸಿದ ತಂದೆತಾಯ್ಗಳ ತೊರೆದು, ತರುಣಿಯರು ಮತ್ತಾವನೋ ಅಪರಿಚಿತನ ಕೈವಿಡಿದು, ಮರಣಪರಿಯಂತ ಅವನ ದಾಸಿಯಾಗುವದೇತಕಾಗಿ ? ಆ ಪ್ರೀತಿಗಾಗಲ್ಲವೆ ? ಸತಿಯರು ಸತ್ತಪತಿಯೊಡನೆ ಚಿತೆಯೇರಿ, ಸುಟ್ಟು ಸಾಯುವ ಸಾಹಸವ ಮಾಡುವದೇತಕಾಗಿ ? ಆ ಒಲವಿಗಾಗಲ್ಲವೇ ? ಚತುರಿಕೆ ! ಚತುರಿಕೆ !! ಹೆಣ್ಗಳಳಿಯುವದು—ಉಳಿಯುವದು, ಆ ಒಂದೊಲವಿಗಾಗಿ. ಅಯ್ಯೋ ! ಗಂಡನೊಲವಿಲ್ಲದ ಹೆಣ್ಣಾದೆ ನಾನು.

[ ಉದ್ವೇಗದಿಂದೆದ್ದು ಚತುರಿಕೆಯನ್ನಪ್ಪುತ್ತ ]

ಗೆಳತೀ ! ಗೆಳತೀ !! ಅರಸೆನ್ನ ಮರೆದಿಹನು, ತೊರೆದಿಹನು. ಇನ್ನಾರು ಗತಿಯೆನಗೆ !

**ಚತುರಿಕೆ:**— ಶಾಂತಳಾಗು; ದೇವೀ ! ಶಾಂತಳಾಗು.

**ಮಾನಿನಿ:**—ಶಾಂತಳಾಗಲೇ? ಚತುರಿಕೆ! ಪರಲೋಕಕ್ಕೈದಿದಾಗಳೆ ದೊರೆವುದೆನಗಾ ಚಿರಶಾಂತಿ. ಇಲ್ಲಿನದೆಲ್ಲ ಬರಿ ಭ್ರಾಂತಿ, ಬರಿ ಭ್ರಾಂತಿ.

**ಚತುರಿಕೆ:**— ದೇವೀ ! ನಿನ್ನಲ್ಲಿ ಪುರುಷರನ್ನು ಒಲಿಸುವ ರೂಪ, ಯೌವ್ವನ, ವಿದ್ಯೆ, ಬುದ್ಧಿಗಳೇ ಮೊದಲಾದ ಎಲ್ಲ ಗುಣಗಳಿರುತ್ತಿರಲು, ಗಂಡನ ಒಲುಮೆಗಾಗಿ ಹಂಬಲಿಸುವದನ್ನು ನೋಡಿ ಆಶ್ಚರ್ಯವೆನಿಸುತ್ತಿದೆ. ಈ ರೂಪ, ಯೌವನ, ವಿದ್ಯೆ, ಬುದ್ಧಿಗಳಲ್ಲಿ, ಒಂದೊಂದೇ ಗುಣದಿಂದ ಹತ್ತಾರು ಪುರುಷರನ್ನು ಹಣ್ಣು ಮಾಡುವ ಹೆಣ್ಣುಗಳಿರಲು, ನಿನ್ನಲ್ಲಿ ಆ ಎಲ್ಲ ಗುಣಗಳು ಒಟ್ಟಾಗಿದ್ದ ಮೇಲೆ ಅರಸನೊಬ್ಬನೇ ಏಕೆ, ಸಕಲ ಪುರುಷ ಜಾತಿಯನ್ನೇ ಸೆರೆಹಿಡಿದು ಗುಲಾಮರನ್ನಾಗಿ ಮಾಡಿಕೊಳ್ಳ-ಬಹುದು. ಚಿಂತೆ ಬಿಡುದೇವಿ ! ನಡೆ ಉಪ್ಪರಿಗೆಯ ಮೇಲಾದರೂ ಹೋಗೋಣ ನಡೆ. ಅಲ್ಲಿಯ ತಂಗಾಳಿಗೆ ನಿನ್ನ ಬೆಂದ ಮನವು ಸ್ವಲ್ಪಾ-ದರೂ ಸಮಾಧಾನ ಹೊಂದೀತು.

**ಮಾನಿನಿ:**— ನನಗಿಲ್ಲಿ ನನ್ನವರು ಇನ್ನಾರು ? ನಿನ್ನನೇ ನಂಬಿ-ಹೆನು. ಈ ಕತ್ತಲೆಯ ದಾರಿಯಲಿ ನೀ ಕರೆದತ್ತ ಬರುತಿಹೆನು. ನಡುವೆ ಕೈಬಿಡದೆ ಕಡೆಮುಟ್ಟಿಸೆಲೆ ಗೆಳತೀ !

**ಚತುರಿಕೆ:**—ಇದೇನು ದೇವೀ ! ನಿನ್ನ ಉಪ್ಪುಂಡ ತೊತ್ತು ನಾನು. ಕೈಮುಗಿದು ಬೇಡಿಕೊಳ್ಳುವರೇ ನನ್ನಂಥ ಹೀನ ದಾಸಿಗೆ? ನಿಮ್ಮ ಸೇವೆ-ಯನ್ನು ನಂಬಿಗೆಯಿಂದ ಮಾಡುವೆ. ಚಿಂತೆ ಬಿಡಿದೇವಿ.

[ಚತುರಿಕೆಯ ಹೆಗಲ ಮೇಲೆ ಭಾರಹಾಕಿ ಮಾನಿನಿ ಹೋಗುವಳು. ಚತುರಿಕೆ ಬಾಗಿಲ ತೆರೆ ಓರೆ ಮಾಡಿ ನೋಡುತ್ತ ]

ಇದೇನು ! ಮಹಾರಾಜರೂ ಕಂಚುಕಿಯೂ ಅತ್ತಿತ್ತ ನೋಡುತ್ತ, ಕಿವಿಯಲ್ಲಿ ಕದ್ದು ಮಾತಾಡುತ್ತ ಬರುತ್ತಿರುವರು. ಇಲ್ಲಿಯೇ ಸ್ವಲ ನಿಲ್ಲಿ ದೇವೀ. ಇದರಲ್ಲೇನೋ ತಂತ್ರವಿದೆ. ತಿಳಿದುಕೊಂಡು ಬೇಗ ಬರುವೆ.

[ಚತುರಿಕೆ ಹೋಗುವಳು. ಮಾನಿನಿಯು ಗೋಡೆಗೆ ಆತು ನಿಂತುಕೊಂಡು, ಶೂನ್ಯ ದೃಷ್ಟಿಯಿಂದ ನೋಡುತ್ತ ಉಸುರ್ಗರೆದು ಗೋಣಲ್ಲಾಡಿಸುತ್ತ, ನಿರ್ಧಾರದಿಂದ]

**ಮಾನಿನಿ:—** ತಂತ್ರ. ಶಿವ ಶಿವ! ಈ ಅರಮನೆಯಲ್ಲೆಲ್ಲಿ ನೋಡಿದ ಡಲ್ಲಿ ತಂತ್ರವೇ ತುಂಬಿಹುದು.

[ ತೆರೆಬೀಳುವದು. ]

## ಪ್ರವೇಶ ೨

ಸ್ಥಳ: — ಅರಮನೆಯ ಭಾಗ- ಸಮಯ ಮುಂಜಾವು.

[ ಕೌಶಿಕ ಕಂಚುಕಿಯರು ಬರುವರು. ಕೌಶಿಕ ಅತ್ತಿತ್ತ ನೋಡುತ್ತ ]

**ಕೌಶಿಕ:—** ಯಾರಾರು ಇಲ್ಲಿಲ್ಲ, ಸುತ್ತಾರು ಮತ್ತಿಲ್ಲ. ನಿಲ್ಲಿಲ್ಲಿಯೇ ಕಂಚುಕಿ, ಎಲ್ಲವನು ಹೇಳುವೆ ನಿಲ್ಲು.

**ಕಂಚುಕಿ:—** ಎಲ್ಲವನ್ನು ಇನ್ನೇನು ಹೇಳುವದು ದೊರೆಗಳೇ! ಪದದ ಅರ್ಥ ಪಲ್ಲವಿಯಲ್ಲೆಂಬಂತೆ, ಹಿಂದಿನ ಮಾತಿನ ಮೇಲಿಂದ ಮುಂದಿನ ಸಂಗತಿ ತಾನೇ ಮನಸ್ಸಿಗೆ ಹೊಳೆದು ಬಿಟ್ಟಿತು ನೋಡಿ.

**ಕೌಶಿಕ:—** ಏನು ಹೊಳೆಯಿತೋ ನಿನಗೆ ?

**ಕಂಚುಕಿ:—** (ಅರಸನನ್ನು ಓರೆ ನೋಟದಿಂದ ನೋಡುತ್ತ ನಸು-ನಕ್ಕು) ಮಹಾರಾಜರ ಮನಸ್ಸು ಆ ಸುಂದರಿಯಲ್ಲಿ ನಟ್ಟಿರುವದೆಂದು, ಅಲ್ಲವೇ ದೊರೆಗಳೇ ?

**ಕೌಶಿಕ:—** ಅಹುದು. ಆ ಸುಂದರಿಯಲೆನ್ನ ಮನನಟ್ಟಿಹುದು, ಅನುರಾಗ ಹುಟ್ಟಿಹುದು. ಆದರೆ ಅವಳನೆಂತೊಲಿಸಬೇಕೆಂಬ ಚಿಂತೆಯಲಿ, ಎದೆಬೆಯ್ಯುತಿದೆ ನೋಡು.

**ಕಂಚುಕಿ:—** ರಾಜ್ಯಲಕ್ಷ್ಮಿಯಂಥವಳೇ ಒಲಿದು, ತಮಗೆ ಮಾಲೆ ಹಾಕಿರುವಳೆಂದ ಮೇಲೆ, ಆ ಸಾಮಾನ್ಯ ಹೆಣ್ಣು ಒಲಿಯದೇನು ದೊರೆಗಳೇ ? ಚಿಂತೆಬಿಡಿ. ನಾನು ಈಗಲೆ ಅವಳನ್ನು ಕರೆತಂದು ಚರಣಕರ್ಪಿಸುವೆ ನೋಡಿ.

[ ಹೋಗಹತ್ತುವನು ]

**ಕೌಶಿಕ**:— ಕಂಚುಕಿ !

**ಕಂಚುಕಿ**: – (ತಿರುಗಿ ಬರುತ್ತ) ಮತ್ತೇನಾಜ್ಞೆ ಮಹಾಪ್ರಭೋ !

**ಕೌಶಿಕ**:— ಯಾರೆಂಬುದನು ಅರಿಯದಲೆ, ಎಲೆ ಮರಳ ! ನೀನಾರ ಕರೆವೆ?

**ಕಂಚುಕಿ**:-- ನೀವೇ ಹೇಳಲಿಲ್ಲವೇ ದೊರೆಗಳೇ! ಆ ಸುಂದರಿಯನ್ನು.

**ಕೌಶಿಕ**:— ಆ ಸುಂದರಿ ! ಆ ಸುಂದರಿಯೆಂದರಾರೆಂದು ಕರೆಯ ಹೊರಟಿಹೆ ನೀನು ? ಈ ನಗರದಲಿ ಸುಂದರಿಯರೆಷ್ಟು ಜನರಿಹರೊ ಬಲ್ಲವರಾರು ?

**ಕಂಚುಕಿ**:— ಸುಂದರಿಯೆಂದು ಅವಳ ಹೆಸರಲ್ಲವೇನು ? ನನಗೇನು ಗೊತ್ತು ದೊರೆಗಳೇ ! ಅವಳ ಹೆಸರೇ ಸುಂದರಿಯೆಂದು ಹೋಗುತ್ತಲಿದ್ದೆ.

**ಕೌಶಿಕ**:— ಎಲ್ಲಿ, ಯಾವೆಡೆಗೆ ಪೋಗುತಲಿದ್ದೆ ?

**ಕಂಚುಕಿ**:—ಎಲ್ಲಿ ! ಯಾವ ಕಡೆಗೆ ! ಹಾಗೆಯೇ ಊರೆಲ್ಲ ಹುಡುಕುತ್ತ ಹೋಗುತಿದ್ದೆ. ಸಿಗದಿದ್ದರೆ ಮುಂದಿಯನ್ನು ಕೇಳುತ್ತಿದ್ದೆ.

**ಕೌಶಿಕ**:— ಏನೆಂದು ? ಆ ಸುಂದರಿ, ಆ ಸುಂದರಿಯೆಂದು ಮನೆ ಮನೆಯ ಹುಡುಕುತ್ತ, ಊರೆಲ್ಲ ಸುತ್ತುತಿದ್ದಿಯಾ ಬುದ್ಧಿವಂತಾ !

**ಕಂಚುಕಿ**:— ಅಯ್ಯೋ ! ಅದೆಲ್ಲಾ ಗೊತ್ತಾಗಲಿಲ್ಲ ನೋಡಿ ಒಡೆಯರೇ! ಹಾಗೇ ಹೋಗಿ ಬಿಟ್ಟಿದ್ದರೆ ಹುಚ್ಚನಿವನೆಂದು ಊರೊಳಗಿನ ಹುಡುಗರೆಲ್ಲರೂ ಕೂಡಿ, ಕಲ್ಲು ಹೆಚ್ಚುತ್ತಿದ್ದರೋ ಏನೋ.

**ಕೌಶಿಕ**:— ಅದಕಾಗಿ ಎಲ್ಲವನು ಹೇಳುವೆನಿಲ್ಲೆಂದೆನಾಗ. ಮುಂದಿನದು ಹೊಳೆಯಿತೆಂದಾಡಿ, ಬುದ್ಧಿವಂತನೆಂದೆಂಬ ಹೆಮ್ಮೆಯಿಂದೋಡಲೆಳಸಿದೆ ನೀನು. ಅದಿರಲಿ ಕೇಳ್ಕಂಚುಕೀ ! ಚನ್ನಾಗಿ ಕಿವಿಗೊಟ್ಟು ಕೇಳೀಗ. ಆ ಸುಂದರಿಯು, ಮಹಾದೇವಿಯೆಂದರಿತಿರುವೆ ನಾನು. ನಗರಶ್ರೇಷ್ಠಿ ನಿರ್ಮಲನ ಮಗಳೆಂದು ಚರನೋರ್ವ ಸುದ್ದಿಯನು ತಂದಿರುವ. ತಿಳಿಯಿತೇ ಕಂಚುಕಿ? ನಗರಶ್ರೇಷ್ಠಿ ನಿರ್ಮಲನ ಮಗಳವಳು ಮಹಾದೇವಿ. ಮರೆಯದಿರು.

**ಕಂಚುಕಿ**:— ಅದು ಹೇಗೆ ಮತ್ತೆ ಮರೆತೇನು ದೊರೆಗಳೇ! ನಗರ ಶ್ರೇಷ್ಠಿ ನಿರ್ಮಲನ ಮಗಳವಳು ಮಹಾದೇವಿ! ಮಹಾದೇವಿ!! ಮಹಾದೇವಿ!!! ಇಷ್ಟು ತಿಳಿದ ಮೇಲೆ ಇನ್ನೇನು ಹುಡುಕುವ ಕಷ್ಟವೇ ಉಳಿಯಿತು ದೊರೆಗಳೇ! ನೆಟ್ಟಗೆ ಆ ಮಹಾದೇವಿ, ಅಹುದು ನಿರ್ಮನ ಮಗಳು ಮಹಾದೇವಿಯ ಮನೆಗೇ ಹೋಗುವೆ ಬಿಡಿ.

[ ಹೋಗ ಹೋಗುತ್ತ ]

**ಕೌಶಿಕ**:— ಎಲೋ, ಏ ಮುದಿ ಮರುಳೇ !

[ ಕಂಚುಕಿ ತಿರುಗಿ ಬರುತ್ತ ]

**ಕಂಚುಕಿ**:— ಮತ್ತೇನು ಮರೆತೆ ದೊರೆಗಳೇ ?

**ಕೌಶಿಕ**:— ಏನು ಅರಿತಿರುವೆಯೆಂದು ಮರೆತೆಯೆಂದಾಡುವದು ? ಜನತೆಯಲಿ ಬೆರೆತಿಲ್ಲ. ಅವರ ರೀತಿನೀತಿಗಳನರಿತಿಲ್ಲ. ಹದ್ದಿನಂದದಿ ಬಹಳ ದಿನ ಬದುಕಿದ್ದರೇನಾಯ್ತು? ಕೈಬೀಸುತಲಿ ಒಂಟಿಗನಾಗಿ ಪೋದರೆ ನೆಂಟು ತನ ಬೆಳೆವುದುಂಟೇನೋ ? ಇದೋ ಕೊಳ್ಳು ರಾಜಾಜ್ಞೆ. ಅರಮನೆಯ ಅಧಿಕಾರಿ, ಒಡುವೆ-ವಸ್ತ್ರ-ವಾಹನಗಳಿಂದೊಡಗೂಡಿ ನಿನ್ನೊಡನೆ ಬರುತಿಹನು. ಹತ್ತಾರು ಜನ ದೂತರೂ ನಿಮ್ಮ ಬೆಂಬತ್ತುವರು. ಹಲವು ಹಂಚಿಕೆಯಿಂದವಳ ಕರೆ ತರುವದು. ಬಿಟ್ಟು ಬರದಿರಿ ನೀವು. ಅದು ನೋಡು. ಈ ಎಡೆಗೆ ಯಾರೋ ಬರುತಿಹರು. ನಾನು ಮರೆಯಾಗಿ ಪೋಗುವೆನು. ತ್ವರೆ ಮಾಡು ನೀ ಕಂಚುಕೀ !

[ ಕೌಶಿಕ ಹಿಂದಿರುಗಿ ಹೋಗುವ ಕಂಚುಕಿ ಮುಂದೆ ನೋಡುತ್ತ ]

**ಕಂಚುಕಿ**:— ಯಾರಿವಳು ! ಎದುರು ಬರುತ್ತಿರುವಳು ? ಚತುರಿಕೆ, ದಾಸಿ. ನೆಂಟಸ್ತನ ಮಾಡಲಿಕ್ಕೆ ಹೋಗುವಾಗ, ಇವಳು ಎದುರು ಬಂದುದು ಶುಭವೋ ? ಅಶುಭವೋ ? ಮುತ್ತೈದೆ ಬಂದರೆ ಶುಭ, ವಿಧವೆ ಬಂದರೆ ಅಶುಭ. ಆದರೆ ಇವಳು ಮುತ್ತೈದಿಯೂ ಅಲ್ಲಾ, ವಿಧವೆಯೂ ಅಲ್ಲಾ. ಅಂದ ಮೇಲೆ ಶುಭವೂ ಅಲ್ಲಾ, ಅಶುಭವೂ ಅಲ್ಲಾ. ಹಾಗಾದರೆ ಮತ್ತೇನನ್ನಬೇಕು ? ಛೇ ! ಹೇಗೇ ಆಗಲಿ ಹಿಂತಿರುಗಿ ಹೋಗುವದೇ ನೆಟ್ಟಗೆ.

[ತಿರುಗಿ ಹೋಗ ಹತ್ತುವ. ಚತುರಿಕೆ ಮತ್ತೊಂದು ಮಗ್ಗಲಿನಿಂದ ಬಂದು]

**ಚತುರಿಕೆ:**— ಯಾಕೆ ಕಂಚುಕೀ! ನನ್ನನ್ನು ಕಂಡು ಹಿಂದಿರುಗಿ ಹೊರಟೆ? ಅಪಶಕುನವಾಯಿತೆಂದು ಅಂಜಿದಿಯೇನು?

**ಕಂಚುಕಿ:**— ಅಪಶಕುನ—ಗಿಪಶಕುನ ಏನೂ ಇಲ್ಲ ಚತುರಿಕೇ! ನಿನ್ನೆ ರಾತ್ರಿ, ಉದ್ಯಾವನದಲ್ಲಿ ನನ್ನ ಮರ್ಯಾದೆಗೇಡು ಮಾಡಿದ್ದು ನೆನಿಸಿ, ಮತ್ತೇಕೆ ಈ ಮುಪ್ಪಿನಲ್ಲಿ ಹೆಂಗಸರ ಹಾದಿಗೆ ಹೋಗಬೇಕೆಂದು ಹಿಂತಿರುಗಿದೆನಷ್ಟೇ.

**ಚತುರಿಕೆ:**—ಅದೇಕಾದೀತು. ನೆಟ್ಟಗಿದ್ದಾಗ ಯಾರಾದರೂ ನಮ್ಮವರು ತಮ್ಮವರು ಅನ್ನುವದು. ಅದೇ ಕೆಟ್ಟ ಮೇಲೇನು? ಎಲ್ಲರೂ ಸುಟ್ಟ ಮೋರೆ, ಇದೇಕೆ ಬಂತು ಎದುರಿಗೆ ಅಪಶಕುನ - ಎಂದು ದಾರಿಬಿಟ್ಟು ದೂರ ಹಾಯುವದು, ಇದು ಲೋಕರೂಢಿ. ಅದಕ್ಕೆ ನೀನೇನು ಮಾಡೀ?

[ಕಣ್ಣೀರಿಡುವಂತೆ ಸೆರಗು ಕಣ್ಣಿಗೆ ಹಿಡಿದುಕೊಳ್ಳುವಳು]

**ಕಂಚುಕಿ:**—ಅಯ್ಯ, ಅಳಹತ್ತಿದಿಯಲ್ಲ ಚತುರಿಕೇ! ನಿನಗೇನಂಥ ಕೆಡಕಾಯ್ತು?

**ಚತುರಿಕೆ:**— ನಾನು ಅತ್ತರೇನು? ಸತ್ತರೇನು? ದಿಕ್ಕೇಡಿ ಹೇಳಿಕೇಳಿ. ಏಕೆಂದು ಯಾರು ಕೇಳುವರು?

**ಕಂಚುಕಿ:**— ನಿನಗೇನು ಅಂಥ ಪ್ರಸಂಗ ಚತುರಿಕೇ? ಮಹಾರಾಣಿಯ ಪ್ರೀತಿಯ ದಾಸಿಯಲ್ಲವೇ ನೀನು?

**ಚತುರಿಕೆ:**— ಪ್ರೀತಿಯ ದಾಸಿಯಂತೆ. ದಾಸಿಯರ ಮೇಲೆ ದೊಡ್ಡವರ ಪ್ರೀತಿ ಎಂಥದೋ. ಸಂತೋಷದಲ್ಲಿದ್ದಾಗ ಬೇಸಿದಾಸಿ, ಸಿಟ್ಟು ಬಂದಾಗ ಹೇಸಿದಾಸಿ. ಇದೇ ಅವರ ಹಾಳಾದ ಪ್ರೀತಿ. ಆ ಮಹಾರಾಣಿ, ತನ್ನ ಸೇವೆ ಬಿಡಿಸಲಿ, ಅರಮನೆ ಬಿಟ್ಟಾದರೂ ಓಡಿಸಲಿ, ಕಡೆಗೆ ನೀನೊಬ್ಬನಾದರೂ ಕೈಬಿಡಲಾರಿಯೆಂದು ನಂಬಿದ್ದೆ ಕಂಚುಕೀ! ನನ್ನ ಹಣೇಬರಹಕ್ಕೆ ಅದೂ ಸುಳ್ಳಾಗಬೇಕೇ?

**ಕಂಚುಕಿ:**— ಏನು? ನೀನು ನನ್ನನ್ನು ನಂಬಿದ್ದೆಯಾ?

**ಚತುರಿಕೆ:—** ನಂಬಿದ್ದೆ.

**ಕಂಚುಕಿ:—** ಮುಪ್ಪಾದವನನ್ನು ?

**ಚತುರಿಕೆ:—** ತಪ್ಪೇನು ?

**ಕಂಚುಕಿ:—** ಇದು ಸತ್ಯವೇ ?

**ಚತುರಿಕೆ:—** ಮತ್ತೇನು ?

**ಕಂಚುಕಿ:—** ಇಷ್ಟು ದಿನ ನೀನು ನನ್ನಮೇಲೆ ಮನಸಿಟ್ಟಿರುವಿ-ಯೆಂಬುದೇ ಗೊತ್ತಿರಲಿಲ್ಲ ಬಿಡು. ಹೆಸರಿಗೆ ತಕ್ಕಂತೆ ಚತುರೆಯೇ ನೀನು. ಗುಣಕೂಡಿದವೆಂದರೆ, ಮನಜೋಡಾಗುವವೆಂದು ಹಿರಿಯರು ಹೇಳುವದು ಸುಳ್ಳಾದೀತೇ? ಮನಸ್ಸುಗಳು ಜೋಡಾದ ಮೇಲೇನು? ಮುಪ್ಪು ನೋಡು ವಂತಿಲ್ಲ; ತಪ್ಪು ಎಣಿಸುವಂತಿಲ್ಲ. ಅದೇ ನಿಜವಾದ ಪ್ರೀತಿ.

[ ಕೈಹಿಡಿಯ ಹೋಗಲು, ಚತುರಿಕೆ ಹಿಟ್ಟಿಸಿಂದ ದೂರಸರಿದು ]

**ಚತುರಿಕೆ:—** ಬೇಡಿಕೊಳ್ಳ ಹೋದವರೆದುರಿಗೆ ತವ್ಮುದೆ ತೋಡಿ-ಕೊಂಡರಂತೆ. ಸಾಕು, ಮಹಾರಾಣಿಯದೂ ತಿಳಿಯಿತು, ನಿನ್ನದೂ ತಿಳಿಯಿತು. ಮತ್ತೆಲ್ಲಾದರೂ ಹೋಗಿ ಮರ್ಯಾದೆಯಿಂದಿರುವದೇ ಲೇಸು. (ಹೋಗಹತ್ತುವಳು)

**ಕಂಚುಕಿ:—** ಚತುರಿಕೇ! ಚತುರಿಕೇ!! ಮತ್ತೆಲ್ಲಿಯೂ ಕಣ್ಮರೆ ಯಾಗಿ ಹೋಗಬೇಡೇ? ಈ ಮಹಾರಾಣಿ ಬೇಡೆಂದರೆ ಮತ್ತೊಬ್ಬ ಮಹಾ ರಾಣಿಯಲ್ಲಿರುವಿಯಂತೆ, ಚಿಂತೆ ಬಿಡು.

**ಚತುರಿಕೆ:—** ಈ ಮಹಾರಾಣಿಯಲ್ಲದೆ ಮತ್ತೊಬ್ಬ ಮಹಾರಾಣಿ ಯಾರು ?

**ಕಂಚುಕಿ:—** ಇದೊ ನೋಡು, ಹೊಸ ಮಹಾರಾಣಿಗಾಗಿ ಮಹಾ ರಾಜರು ಕೊಟ್ಟ ಆಜ್ಞಾಪತ್ರ. ನಗರಶ್ರೇಷ್ಠಿ ನಿರ್ಮಲನ ಮಗಳಾದ ಮಹಾದೇವಿಯಂತೆ. ಅವಳನ್ನು ಕರೆತರಲು, ಆನೆ-ಕುದುರೆ-ವಸ್ತ್ರ-ಒಡವೆ-ರಥ-ಪದಾತಿ ಮೊದಲಾದ ವೈಭವದೊಡನೆ ಹೊರಡೆಂದು, ನನಗೆ ಮಹಾ ರಾಜರ ಆಜ್ಞೆಯಾಗಿದೆ. ಮಾತಿನಲ್ಲಿಯೇ ಹೊತ್ತಾಯ್ತು ಹೊರಡುತ್ತೇನೆ.

ಹುಚ್ಚಳಂತೆ ಎತ್ತಾದರೂ ಹೋಗಿ ನನಗೆ ಚಿಂತೆಯನ್ನುಂಟುಮಾಡಬೇಡ. ಆ ಹೊಸ ಮಹಾರಾಣಿಗೆ ನೀನೇ ದಾಸಿ ತಿಳಿಯಿತೇ ?

[ ಎಂದು ಅವಳನ್ನೇ ನೋಡುತ್ತ ಹೋಗುವನು. ]

**ಚತುರಿಕೆ:**—(ಸ್ವಗತ) ತಿಳಿದುಕೊಳ್ಳಬೇಕೆಂದೇ ಬಂದಿದ್ದೆ. ಇಷ್ಟು ಹೇಳಿದ ಮೇಲೆ ತಿಳಿಯದಿರಲಿಕ್ಕೇನು ನಾನು ಸಣ್ಣ ಹುಡುಗಿಯೇ ?

[ ಹೋಗುವಳು ]

## ಪ್ರವೇಶ ೩

ಮಹಾದೇವಿಯ ಮನೆಯ ಮುಂದಿನ ಪಡಸಾಲೆ. ಸಮಯ-ಮಧ್ಯಾಹ್ನಕ್ಕೆ ಸಮೀಪಿಸಿದೆ.

[ಮನೆಯ ಎಡಬಲಕ್ಕೆ ಎರಡು ಕಟ್ಟೆಗಳು. ಮೇಲೆ ಚಪ್ಪರ. ನಡುವೆ ಬಾಗಿಲು. ಬಲಗಡೆಯ ಕಟ್ಟೆಯ ಮೇಲೆ ಮಹಾದೇವಿ ಹಾಡುತ್ತ ರಾಟೆಯ ಮೇಲೆ ನೂಲು ತೆಗೆಯುತ್ತಲಿದ್ದಾಳೆ. ಮಗ್ಗುಲು ಹಂಜಿ ಬಿದ್ದಿದೆ ಎದುರು ಗೋಡೆಯ ಗೂಟಕ್ಕೆ, ಸಿದ್ಧವಾದ ನೂಲು ತೂಗುಬಿದ್ದಿದೆ ಎಡಗಡೆಯ ಕಟ್ಟೆಯ ಮೇಲೆ ಗಾದಿ ದಿಂಬು-ಗಳ ಆಸನವಿದ್ದು, ಮುಂದೆ ಪೆಟ್ಟಿಗೆ. ಅದರ ಮೇಲೆ ಲೆಕ್ಕದ ಪುಸ್ತಕ, ಮಗ್ಗುಲು ಮಸಿಯ ಬುರುಡೆ ಲೆಕ್ಕಣಿಕೆಗಳಿವೆ. ]

**ಹಡೆವುದರಿದು ನರಜನ್ಮ । ಪಡೆವುದರಿದು ಗುರುಕಾರುಣ್ಯ ॥**
**ಚೆನ್ನಮಲ್ಲಿಕಾರ್ಜುನನ ಶರಣರ ಸಂಗದಿ । ನಲಿದಾಡು ಮನವೇ ನಲಿದಾಡು ॥**

[ ಪದ ಮುಗಿಯುವ ಹೊತ್ತಿಗೆ ಸುಮತಿ ತಲೆಯ ಮೇಲೆ ಕೊಡವನ್ನಿಟ್ಟು-ಕೊಂಡು ಹೊರಗಿನಿಂದ ಬಂದು, ಕಟ್ಟೆಯ ಬಳಿಯಲ್ಲಿ ಕೊಡವಿಳಿಸಿ ಬಗಲಲ್ಲಿಡುತ್ತ ]

**ಸುಮತಿ:**— ಮಹಾದೇವಿ ! ರಾಟಿಯನ್ನಿನ್ನೂ ಬಿಡುವದಿಲ್ಲವೇ ? ಹೊತ್ತು ನೆತ್ತಿಯ ಮೇಲೆ ಬಂತು ನೋಡು ಮಗೂ. ಹೂಪತ್ರಿಗಳನ್ನೆತ್ತಲು ಹೊರಡಮ್ಮಾ, ಪೂಜೆಗೆ ತಡವಾಗುವದು.

**ಮಹಾದೇವಿ:**—(ರಾಟಿಯನ್ನು ನಿಲ್ಲಿಸಿ) ಹೊತ್ತಾಯ್ತೇ ? ಅಮ್ಮಾ ! ಈ ರಾಟಿಯಲ್ಲೇನು ಮಾಟವಿದೆಯೋ ಕಾಣೆ. ಸುತ್ತುತಿರುವಾಗ ಹೊತ್ತು ಗೊತ್ತಾಗದೋಡುವದು.

[ ಸುಮತಿ ಮನೆಯೊಳಕ್ಕೆ ಹೋಗುವಳು. ಮಹಾದೇವಿ ರಾಟಿಯನ್ನು ಒತ್ತಟ್ಟಿಗಿಟ್ಟು ಮನೆಯೊಳಕ್ಕೆ ಹೋಗಿ, ಕೆಲ ಹೊತ್ತಿನ ನಂತರ ಕೈಯಲ್ಲಿ ಬುಟ್ಟಿ ಹಿಡಿದು ಬರುವಳು. ಹಿಂದೆಯೇ ಕುಮಾರನು ಬಂದು ಬಾಗಿಲ ಬಳಿಯಲ್ಲಿ ನಿಂತು ]

**ಕುಮಾರ:**— ಏನೇ, ಏ! ಽಽ

[ ಮಹಾದೇವಿ ಕೇಳದವಳಂತೆ ಹಾಗೇ ಹೋಗಹತ್ತುವಳು. ]

ಏನೇ! ಽಽ ಕೂಗುವದು ಕೇಳುವದಿಲ್ಲವೇನೇ? ಹಾಗೆಯೇ ಹೊರಟ-ಯಲ್ಲಾ? ಹೋದವೇನೇ ಕಿವಿ?

[ಸುಮತಿ ಬರಿಗೊಡವನ್ನು ಬಗಲಲ್ಲಿಟ್ಟುಕೊಂಡು ಬಂದು ಸಿಟ್ಟಿನಿಂದ ಕುಮಾರನ ಕಿವಿ ಹಿಂಡುವಳು. ಕುಮಾರನು ನೋವಿನಿಂದ ಮುಖ ಕೆಡಿಸಿ ತಿರುಗುತ್ತ]

ಅಯ್ಯ ಽಽಽ ನನ್ನವಲ್ಲ, ಅವಳವತ್ತೇ ಅವಳ ಕಿವಿ.

**ಸುಮತಿ:**-(ಕಿವಿ ಹಿಂಡುತ್ತಲೆ) ಅವಳವೇಕಾದಾವು. ನಿನ್ನ ಕಿವಿಗಳೇ ದಿನದಿನಕ್ಕೆ ಉದ್ದಾಗ ಹತ್ತಿವೆ, ಒತ್ತಿ ಸ್ವಲ್ಪ ಹತ್ತೆ ಮಾಡುತ್ತೇನೆ ನಿಲ್ಲು. ಅವಳಿಗೆ ಹೆಸರು-ಗಿಸರು ಏನೂ ಇಲ್ಲಬೇನೋ ಕತ್ತೆ! ಏನೇ, ಏ ಅನ್ನಲಿಕ್ಕೆ?

**ಕುಮಾರ:**—(ಕಿವಿ ಬಿಡಿಸಿಕೊಂಡು) ಇದೇನತ್ತೇ! ಗಂಡ, ಹೆಂಡತಿಗೆ ಏನೇ ಏ ಅನ್ನದೆ ಹೆಸರುಗೊಂಡೇ ಕರೆಯಬೇಕೇನು?

**ಸುಮತಿ:**— ಹೆಂಡತಿಯೆಂದು ಹೇಳಲಿಕ್ಕೆ ಅವಳ ಕೂಡ ನಿನ್ನ ಮದುವೆಯಾಗಿದೆಯೇನೋ?

**ಕುಮಾರ:**— ಮದುವೆ ಯಾಗಿದೆಯೇನು! ಮದುವೆ ಯಾಗದಿದ್ದರೇನಾಯಿತು. ಮದುವೆ ಮಾಡುವೆನೆಂದು ಒಂದಲ್ಲ, ಎರಡಲ್ಲ, ಮೂರುಸಾರೆ ಮಾತು ಕೊಟ್ಟಿರುವಿಯಲ್ಲತ್ತೆ? ಅದು ಸುಳ್ಳೇನು? ಆ ಹರಿಶ್ಚಂದ್ರ; ಹರಿಶ್ಚಂದ್ರ ಮಹಾರಾಜನ ಕಥೆ ಕೇಳಿರುವಿ ಇಲ್ಲತ್ತೆ? ಕನಸಿನಲ್ಲಿ ಮಾತು ಕೊಟ್ಟಿದ್ದಕ್ಕೆ, ಎಚ್ಚರಾದ ಮೇಲೆ ಮನಸ್ಸಿನಿಂದ ವಿಶ್ವಾಮಿತ್ರನಿಗೆ ರಾಜ್ಯ ಒಪ್ಪಿಸಿ ಬಿಟ್ಟನಂತೆ ಮಹಾನುಭಾವ. ನೀನಂತೂ ಎಚ್ಚರಿದ್ದಾಗ ಮನಸ್ಸಿನಿಂದ ಮಾತು ಕೊಟ್ಟಿರುವಿಯೆಂದ ಮೇಲೆ ...

**ಸುಮತಿ:**—ಕನಸಿನಲ್ಲಾದರೂ ಬಿಡುವಂತೆ ಕಾಣುವದಿಲ್ಲ. ಮಹಾರಾಯಾ! ವಿಶ್ವಾಮಿತ್ರನಂತೆ ಕಾಡಲಿಕ್ಕೆ ನಮಗೊಳ್ಳೇ ಗಂಟುಬಿದ್ದಿ.

**ಕುಮಾರ:**—ಮಹಾದೇವಿಯನ್ನು ನನಗೆ ಗಂಟು ಹಾಕಿ ಬಿಡತ್ತೇ! ಅಂದರೆ ನಿಮಗೆ ಬಿದ್ದ ಗಂಟು, ಆ ಮೇಲೆ ತನ್ನಿಂದ ತಾನೆ ಬಿಚ್ಚಿ ಬಿಡುಗಡೆ ಯಾಗುವದು ನೋಡು.

**ಸುಮತಿ:—** ಮಹಾದೇವಿಯನ್ನು ಗಂಟು ಹಾಕಿದರೆ ಬಿಡುಗಡೆಯಾಗುವದಂತೆ. ಇನ್ನೇನು ಬಿಡುಗಡೆಯಾದೀತು. ಸುಡುಗಾಡಿಗೆ ಹೋಗುವ ವರೆಗೆ ಎಲ್ಲರ ಜೀವಕ್ಕೂ ಜೋಡಾಗುವಿ ಶನಿ ಮಹಾರಾಯಾ. ಬಿಡುಗಡೆಯಾಗುವದಂತೆ! ಈ ಮೂರ್ಖನ ಕೂಡೇನು ಮಾತು ನಡೆ ಮಹಾದೇವಿ. ಹೂಪತ್ರಿಗಳನ್ನೆತ್ತಲು ಹೊತ್ತಾಗುವದು.

[ ಮಹಾದೇವಿ ಸುಮತಿಯರು ಹೋಗಹತ್ತುವರು. ]

**ಕುಮಾರ:—** ಹೋಗಬೇಡ ನಿಲ್ಲು ಮಹಾದೇವಿ. ಹೂಪತ್ರಿಗಳನ್ನೆತ್ತಲು ಹೋಗುವದರೊಳಗೆ ಹಾದಿಯಲ್ಲಿ ಹರೆಯದ ಹೆಣ್ಣು, ಮತ್ತಾರ ಕಣ್ಣಾದರೂ ಹತ್ತಿದರೆ ಮಾಡುವದೇನು ? ಮೊದಲೆ ಕೆಟ್ಟದಿನಮಾನ. ದಾರಿಯಲ್ಲಿ ಪುಂಡನಾವನಾದರು ಕಂಡರಂತೂ ತೀರೇ ಹೋಯಿತು. ಹೊತ್ತುಕೊಂಡೇ ಹೋಗಿ ಬಿಟ್ಟಾನತ್ತೇ. ನಿನ್ನೆ ರಾತ್ರಿ ಆದದ್ದು ಇಷ್ಟರಲ್ಲಿ ಮತ್ತೆ ಮರೆತು ಬಿಟ್ಟಯೇನು ? ಅದಕ್ಕಾಗಿ ಮಹಾದೇವೀ! ಹೋಗಬೇಡ ನಿಲ್ಲು.

[ಮಹಾದೇವಿ ಸುಮತಿಯರು ಕುಮಾರನ ಮಾತಿಗೆ ಕಿವಿಗೊಡದೆ ಹೋಗಿಬಿಡುವರು.]

ಮಹಾದೇವಿ! ಮಹಾದೇವಿ!! ಮುಂದಾಗುವ ನಿನ್ನ ಗಂಡ ಆಜ್ಞೆ ಮಾಡುತ್ತಲಿದ್ದಾನೆ. ಒಂದು ಹೆಜ್ಜೆಯನ್ನೂ ಮುಂದಿಕ್ಕ ಬೇಡಾ.

[ ಕುಮಾರನು ಅವರ ಬೆನ್ನು ಹತ್ತಿ ಸ್ವಲ್ಪ ಮುಂದಕ್ಕೆ ಬಂದು ]

ಪತಿ ಆಜ್ಞೆ ಮೀರಿ ಹೋಗುವಿಯಾ ? ಮಹಾದೇವಿ! ಪತಿಯೆಂದರೆ ಸಾಮಾನ್ಯನಲ್ಲ. ಶಾಸ್ತ್ರಗಳು ಸಾರಿ ಸಾರಿ ಹೇಳುತ್ತವೆ. ಸತಿಗೆ ಪತಿಯೇ ಪ್ರತ್ಯಕ್ಷ ದೇವರು. ಪತಿ ಆಜ್ಞೆ ಮೀರಿ ಹೋಗಿ ಪಾಪಕ್ಕೆ ಭಾಗಿಯಾಗಬೇಡ. ಪತಿ ಆಜ್ಞೆ ಮೀರುವ ಹೆಣ್ಣುಗಳಿಗೆ, ಯಮಲೋಕದಲ್ಲಿ ಏನು ಶಾಸನವಾಗುವದೆಂಬುದು ಗೊತ್ತೇ? ಸಪ್ತ ಪಾತಾಳದಾಚೆಗಿರುವ ಕಗ್ಗತ್ತಲೆಯ ರಾಜ್ಯಕ್ಕೆ ಎಳೆದೊಯ್ದು, ಕಾಯ್ದ ಹಂಚಿನ ಮೇಲೆ ಹುರಿಯುವರಂತೆ, ಕುದಿಯುವ ಎಣ್ಣೆಯಲ್ಲಿ ಕರಿಯುವರಂತೆ, ಮಲಮೂತ್ರದ ಕುಂಡದಲ್ಲಿ ನೂಕುವರಂತೆ, ತಲೆಯ ಮೇಲೆ ಮುಳ್ಳು ದೊಣ್ಣೆಯಿಂದ ಪೆಟ್ಟು ಹಾಕುವರಂತೆ. ಈಗೇಕೆ ತಿಳಿದೀತು ? ಹೋಗು, ಹೋಗು. ನಾಳೆ ಸತ್ತ ಮೇಲೆ ಗೊತ್ತಾಗುವದು. ಪಾಶದಿಂದ ಬಿಗಿಬಿಗಿದು ಕಟ್ಟಿ, ಯಮದೂತರು........

[ ರಥ ಕುದುರೆಗಳೊಡನೆ ಕಂಚುಕಿ, ರಾಜ್ಯಾಧಿಕಾರಿ, ದೂತರು, ಬರುವರು. ಒಬ್ಬ ದೂತ ಕುಮಾರನ ಬೆನ್ನು ತಟ್ಟುತ್ತ ]

**ದೂತ:**— ಅಲ್ಲಯ್ಯಾ, ನಾವು ರಾಜದೂತರು.

**ಕುಮಾರ:**— ರಾಜದೂತರು !

**ದೂತ:**— ಹೌದು. ನಾವು ರಾಜದೂತರು. ನಿರ್ಮಲಶ್ರೇಷ್ಠಿಯ ಮನೆಯಲ್ಲವೇನಯ್ಯಾ ಇದು ?

**ಕುಮಾರ:**--(ಅವರನ್ನು ಮೇಲೆ ಕೆಳಗೆ ಸುತ್ತುಮುತ್ತು ನೋಡುತ್ತ) ನಿರ್ಮಲಶ್ರೇಷ್ಠಿಯ ಮನೆ! ಇದೇನು? ಕುದುರೆ, ರಥ, ಮಂದಿಯನ್ನು ಕಟ್ಟಿ ಕೊಂಡು, ಬೀಗತನಕ್ಕೆ ಹೊರಟವರಂತೆ ಸಡಗರದಿಂದ ಬಂದಿರುವಿರಲ್ಲಾ, ಯಾರದಾದರೂ ಮದುವೆಯೇನು ?

**ಕಂಚುಕಿ:**—ಹೌದಯ್ಯಾ, ಮದುವೆಗೆಂದು ಬೀಗರಾಗಿ ಬಂದಿದ್ದೇವೆ.

**ಅಧಿಕಾರಿ:**—ಎಲೋ ! ಆ ವಸ್ತ್ರಾಭರಣಗಳ ತಟ್ಟೆಗಳನ್ನೊಯ್ದು ಆ ಕಟ್ಟೆಯ ಮೇಲಿಡು. ಸುಮ್ಮನೇಕೆ ನಿಂತಿರಿ. ರಥದಿಂದ ಕುದುರೆಗಳನ್ನು ಬಿಚ್ಚಿ ಆಚೆಗೆ ನೆರಳಲ್ಲಿ ಕಟ್ಟಬಾರದೆ? ರಥದಲ್ಲಿ ಮತ್ತೇನಾದರೂ ಮರೆತು ಬಿಟ್ಟಿರೇನು? ಇನ್ನೊಮ್ಮೆ ನೆಟ್ಟಗೆ ನೋಡಿ ನೀವೆಲ್ಲರೂ ತಿಳಿಯಿತೇ, ನೀವೆ ಲ್ಲರೂ ಆಚೆಯ ಕಟ್ಟೆಯ ಮೇಲೆ ಕುಳಿತು ವಿಶ್ರಾಂತಿ ಹೊಂದಿರಿ.

[ಕೆಲಜನ ದೂತರು ತಟ್ಟೆಗಳನ್ನು ಒಯ್ದು ಕಟ್ಟೆಯ ಮೇಲಿಡುವರು. ಮತ್ತು ಕೆಲವರು ಕುದುರೆ ಬಿಚ್ಚಿ ಬೇರೆಡೆಗೆ ಕಟ್ಟುವದರಲ್ಲಿ ತೊಡಗುವರು ಅಧಿಕಾರಿ ಕಟ್ಟೆಯ ಮೇಲೆ ಒಂದಾಸನದಲ್ಲಿ ಕುಳಿತು ಗಾಳಿ ಹಾಕಿಕೊಳ್ಳತೊಡಗುವ ]

**ಕುಮಾರ:**— ಎಲಎಲಾ ! ಏನಿದು ? ಹೇಳದೆ ಕೇಳದೆ, ಕುದುರೆ, ರಥ, ಮಂದಿಯಿಂದ, ನಮ್ಮ ಕಟ್ಟೆ ಅಂಗಳಗಳನ್ನೆಲ್ಲಾ ತುಂಬಿಸಿ, ಮನೆಯ- ವರಿಗೇ ಅಡ್ಡಾಡಲಿಕ್ಕೆ ಇಂಬಿಲ್ಲದಂತೆ ಮಾಡಿದಿರಲ್ಲಾ ? ಯಾರು ನೀವು ? ಯಾಕೆ ಬಂದಿರಿ? ಏನು ಸುದ್ದಿ? ಏನು ಸಮಾಚಾರ ? ಏನು ಏನು ಇದೆಲ್ಲಾ ?

**ಕಂಚುಕಿ:**— ಏನೆಂದು ಏನು ಕೇಳುವಿ ? ನಿಮ್ಮ ವಂಶವೇ ಉದ್ಧಾರವಾಗುವ ಹೊತ್ತು ಬಂದಿದೆ ಬಾರಯ್ಯಾ.

**ಕುಮಾರ:**—ಏನು ! ನಮ್ಮ ವಂಶ ಉದ್ಧಾರವಾಗುವ ಹೊತ್ತೇ? ಆ ಹೊತ್ತನ್ನು ನೀವೇ ಹೊತ್ತುಕೊಂಡು ಬಂದಿರುವಿರೋ ಹೇಗೆ ?

**ಕಂಚುಕಿ:**—ಹೌದಯ್ಯಾ, ನಾವೇ ಹೊತ್ತುಕೊಂಡು ಬಂದಿದ್ದೇವೆ. ಕಟ್ಟೆಯ ಮೇಲಾದರೂ ನಡೆ. ಬಿಚ್ಚಿ ತೋರಿಸುತ್ತೇವೆ.

[ಕಟ್ಟೆಯ ಮೇಲೆ ಅಧಿಕಾರಿಯ ಹತ್ತರವೇ ಆಸನದ ಮೇಲೆ ಕುಳಿತು, ಪಟ್ಟಿ-ಗಳನ್ನು ಹತ್ತರ ಎಳೆದುಕೊಳ್ಳುತ್ತ ]

ಏನಯ್ಯಾ ! ನಿಮ್ಮ ಮನೆಯಲ್ಲಿ ಆ ಸುಂದರಿ, ಆ ಸುಂದರಿ ಇರುವಳಲ್ಲಾ....

**ಕುಮಾರ:**— ಆ ಸುಂದರಿ ! ಆ ಸುಂದರಿಯೆಂದರಾರಯ್ಯಾ ? ಆ ಸುಂದರಿ, ಈ ಸುಂದರಿಯೆಂದಾರೂ ನಮ್ಮ ಮನೆಯಲ್ಲಿಲ್ಲ ಬಿಡಿ.

**ಕಂಚುಕಿ:**— ಅದೇಕೆ ! ಮಹಾಜರೇ ಹೇಳಿದ್ದಾರೆ. ಆ ಸುಂದರಿ, ಅವಳ ಹೆಸರೇನಯ್ಯಾ ? ( ಯೋಚಿಸಿ ಬಗೆ ಹರಿಯದ್ದರಿಂದ ) ಛಿ ಛೀ ! ಇದೆಂಥ ಹಾಳಾದ ಮುಪ್ಪು? ಮಾತು ಮಾತಿಗೂ ಮರೆವೆಯಾಗುವದು.

**ಕುಮಾರ:**— ಅದಕ್ಕೇ ಅನ್ನುತ್ತೇನೆ. ಮಹಾರಾಯಾ ! ಯಾವ ಶ್ರೇಷ್ಠಿಯ ಮನೆಗೋ ಹೊರಟು ಮರೆತು ನಿರ್ಮಲಶ್ರೇಷ್ಠಿಯ ಮನೆಯಿಂದಿಲ್ಲಿಗೆ ಬಂದಿರುವಿರೇನೋ ನೋಡಿ. ಯಾರಿಗಾದರೂ ಮುಪ್ಪು ಬಂದ ಮೇಲೆ ಮರೆವೆಯಾಗುವದು ಸಹಜ. ನೆನಪು ಮಾಡಿಕೊಳ್ಳಿ. ಅದಕ್ಕೇನು ಮತ್ತೊಮ್ಮೆ ನೆನಪು ಮಾಡಿಕೊಂಡು ನೋಡಿ.

**ಕಂಚುಕಿ:**— ಹಾಂ ! ನಿರ್ಮಲಶ್ರೇಷ್ಠಿಯ ಮಗಳು ಮಹಾದೇವಿ. ಹೌದು ಮಹಾದೇವಿ.

**ಕುಮಾರ:**— (ಆಶ್ಚರ್ಯದಿಂದ) ಏನು ಮಹಾದೇವಿ ?

**ಕಂಚುಕಿ:**— ಹೌದು ಮಹಾದೇವಿ. ಅವಳ ಚಲುವಿಕೆಗೆ ನಮ್ಮ ಮಹಾರಾಜರು, ಯಾರೆಂದಿ ? ಈ ಉಡುತಡಿಯನಾಡೊಡೆಯರು, ಕೌಶಿಕ ಮಹಾರಾಜರು ಮನಸೋತು ಅವಳನ್ನು ಮದುವೆಯಾಗಬೇಕೆಂದಿದ್ದಾರೆ, ಮದುವೆ.

**ಕುಮಾರ:—** (ಖಿನ್ನತೆಯಿಂದ) ಏನು! ನಮ್ಮ ಕೌಶಿಕ ಮಹಾರಾಜರು, ಮಹಾದೇವಿಯನ್ನು ಮದುವೆಯಾಗಬೇಕೆಂದಿದ್ದಾರೆಯೋ ? (ಸ್ವಲ್ಪ ಯೋಚಿಸಿ) ಅಲ್ಲಾ, ಅರಸರಿಗೆ ಪ್ರಜೆಗಳೆಂದರೆ ಮಕ್ಕಳಲ್ಲವೇ ?

**ಕಂಚುಕಿ:—**ಅಲ್ಲೆನ್ನುವವರಾರು? ಅರಸರಿಗೆ ಪ್ರಜೆಗಳು ಮಕ್ಕಳು, ಪ್ರಜೆಗಳಿಗೆ ಅರಸು ತಂದೆ.

**ಕುಮಾರ:—** ಅಂದ ಮೇಲೆ, ಮಕ್ಕಳ ಕೂಡ ಮಹಾರಾಜರು ಮದುವೆಯಾಗುವರೆಂದರೆ, ಯಾರಾದರೂ ನಕ್ಕಾರು ತಗೆ.

**ಕಂಚುಕಿ:—** ಇದು ಸುಳ್ಳೆಂದು ತಿಳಿದಿಯೇನು ? ಪ್ರತ್ಯಕ್ಷ ಮಹಾ-ರಾಜರೇ ಕನ್ನೆಗೆ ಉಡುಗರೆಯೆಂದು ಇದೋ ನೋಡು, ಜರದ ವಸ್ತ್ರ ನೋಡಿದಿಯಾ? ಮುತ್ತು,ರತ್ನ,ವಜ್ರ,ಚಿನ್ನದ ಒಡವೆಗಳನ್ನು ಕಳಿಸಿದ್ದಾರೆ. ಮದುವೆಯಾಗಿ ಮಹಾರಾಣಿಯನ್ನಾಗಿ ಮಾಡಿಕೊಳ್ಳುವರಂತೆ ಮಹಾರಾಣಿಯನ್ನು. ಇನ್ನೇನು, ನಿಮ್ಮ ಭಾಗ್ಯ ತೆಗೆಯಿತು ಬಿಡು. ಯಾಕೆ ಏನೆಂದಿ? ತಾನಾಗಿ ನಡೆದು ಬಂದ ಭಾಗ್ಯಲಕ್ಷ್ಮಿಯನ್ನು ಒದೆದು ಬಿಡುವದುಂಟೇ ? ಹೇಳು, ಹೇಳು. ಸುಮ್ಮನೇಕಿರುವಿ ಮಾತಾಡು. ಮದುವೆಯಾಗಲು ಒಪ್ಪಿಗೆ ಕೊಡುವಿಯಾ ?

**ಕುಮಾರ:—** (ಒಡವೆ ನೋಡುತ್ತಿದ್ದವನು ಮುಖವೆತ್ತಿ) ಏನಿದು ! ನನ್ನನ್ನೇ ಹೆಣ್ಣೆಂದು ತಿಳಿದಿಯೋ ಏನು ? ಮದುವೆ ಯಾಗಲು ಒಪ್ಪಿಗೆ ಕೊಡುವಿಯಾ ಎಂದು ಕೇಳುವಿ. ನಾನು ಗಂಡಸು ಮಹಾರಾಯಾ ಗಂಡಸು.

**ಕಂಚುಕಿ:—** ನನಗೆ ಗಂಡಸು, ಹೆಂಗಸೆಂಬುದಿಷ್ಟೂ ಗೊತ್ತಾಗುವದಿಲ್ಲವೇ ? ನಿನಗೆ ಹೆಣ್ಣೆಂದು ಮದುವೆಗೆ ಒಪ್ಪಿಗೆ ಕೇಳಲಿಲ್ಲ. ಮನೆಯ ಯಜಮಾನನೆಂದು ಪ್ರಶ್ನೆಮಾಡಿದೆ.

**ಕುಮಾರ:-**ಯಜಮಾನ ! ಯಜಮಾನನೆನ್ನಲಿಕ್ಕೆ, ನನ್ನ ಮುಖದ ಮೇಲೆ ಮೀಸೆಗಳಾದರೂ ಮೂಡಿಲ್ಲ. ನೋಡಬಾರದೇ ? ಇನ್ನೂ ಹುಡುಗ.

**ಅಧಿಕಾರಿ:—** ನೀನಾರೋ ಹಾಗಾದರೆ ?

**ಕುಮಾರ:—** ನಾನೇ! ನಾನು ನೋಡಿ ಈ ಮನೆಯ ಯಜಮಾನ ನಿರ್ಮಲಶ್ರೇಷ್ಠಿ, ಆತನ ಸೋದರ ಅಳಿಯ. ನಿರ್ಮಲಶ್ರೇಷ್ಠಿ ನನ್ನ ಮಾವ. ಸುಮತಿ, ಅಂದರೆ ನಿರ್ಮಲಶ್ರೇಷ್ಠಿಯ ಹೆಂಡತಿ ನನ್ನ ಅತ್ತೆ. ಮಹಾದೇವಿ, ಮಹಾದೇವಿಯಂತೂ ಮುಂದಾಗುವ ನನ್ನ ಹೆಂಡತಿ.

**ಅಧಿಕಾರಿ:—** ಅದೆಲ್ಲ ಪುರಾಣವಾರಿಗೆ ಬೇಕು. ನಾವು ಕೇಳಿದಷ್ಟಕ್ಕೆ ಉತ್ತರ ಹೇಳು. ಈ ಮನೆಯ ಯಜಮಾನ ನಿರ್ಮಲಶ್ರೇಷ್ಠಿ ಎಲ್ಲಿ? ಮನೆಯಲ್ಲಿಲ್ಲವೇ?

**ಕುಮಾರ:—** ಇಲ್ಲಾ.

**ಅಧಿಕಾರಿ:—** ಕಡೆಗೆ ಮಹಾಧೇವಿಯಾದರೂ?

**ಕುಮಾರ:—** ಅವಳೂ ಇಲ್ಲಾ.

**ಅಧಿಕಾರಿ:—** ಮತ್ತಾರಿದ್ದಾರೆ ಮನೆಯಲ್ಲಿ ಹಾಗಾದರೆ?

**ಕುಮಾರ:—** ಯಾರೂ, ಯಾರೂ ಇಲ್ಲಾ.

**ಅಧಿಕಾರಿ:—** (ಸಂತಾಪದಿಂದೆದ್ದು ನಿಂತು) ಯಾರು, ಯಾರೂ ಇಲ್ಲ. ಯಾರೂ ಇಲ್ಲವೆಂದು ನಮಗೆ ಮೋಸ ಮಾಡಬೇಕೆಂದಿರುವೆಯಾ? ರಾಜಾಜ್ಞೆಯಿದು, ರಾಜಾಜ್ಞೆ. ನಗೆಮಾತೆಂದು ತಿಳಿದಿಯಾ? ಮನೆಯಲ್ಲಿ ಯಾರೂ ಇಲ್ಲವಂತೆ. ದೂತರೇ ಏನು ನೋಡುವಿರಿ ನುಗ್ಗಿರಿ. ಅಂದರೆ ಮನೆಯಲ್ಲಿದ್ದವರು ತಾವೇ ಎದ್ದು ಹೊರಗೆ ಬರುವರು ನುಗ್ಗಿರಿ—ನುಗ್ಗಿರಿ.

[ದೂತರು ಕುಳಿತವರೆದ್ದು ಬಾಗಿಲ ಕಡೆಗೆ ಹೋಗತೊಡಗುವರು. ಕುಮಾರನು ಎದ್ದು ನಿಲ್ಲುತ್ತ ನಿಂತಲ್ಲಿಂದಲೇ]

**ಕುಮಾರ:—** ಎಲ ಎಲಾ! ಭಕ್ತರು, ಭಕ್ತರ ಮನೆಯಿದು. ಭಕ್ತರ ಮನೆಯಲ್ಲಿ ಭವಿಗಳು ಹೊಕ್ಕು ಮೈಲಿಗೆ ಮಾಡುವದುಂಟೇನಯ್ಯಾ. ಹೊಗಬೇಡಿ, ಹೊಗಬೇಡಿ. ನಾನಂತೂ ಖಂಡಿತವಾಗಿ ಹೇಳುವೆ. ಹೊಗಬೇಡಿ.

[ ದೂತರು ಮನೆಯೊಳಗೆ ಹೊಗುವದನ್ನು ನೋಡಿ ]

ಹೋಗುವಿರಾ ? ಹೊಗಿರಿ, ಹೊಗಿರಿ. ಈಗ ನಮ್ಮತ್ತೆ ಬರಲಿ ನೋಡಿ. ನಮ್ಮತ್ತೆಯೆಂದರೆ ಸಾಮಾನ್ಯಳೆಂದು ತಿಳಿದಿರೇನು ? ಚಂಡಿ-ಚಾಮುಂಡಿ ಅವತಾರ. ಅವಳು ಕಂಡಳೆಂದರೆ ಆಮೇಲೆ ನೋಡಿ ನಿಮ್ಮ-ಗಳ ಬಂಡು. ಮಾವ ನಿರ್ಮಲಶ್ರೇಷ್ಠಿ, ಆತನೂ ಬರುವ ಹೊತ್ತಾಗಿದೆ ನಿಲ್ಲಿ. ಹಾ ! ಅತ್ತೆ, ಮಾವ, ಇಬ್ಬರೂ ಬಂದರು. ಏನು ! ನನ್ನನ್ನು ಹುಡುಗನೆಂದು ತಿಳಿದು ಅಂಜಿಸಿ ಮನೆ ಹೊಗುವಿರಾ ?

[ ಸುಮತಿ ತಲೆಯ ಮೇಲೆ ಕೊಡವಿಟ್ಟುಕೊಂಡು ಒಂದು ಮಗ್ಗುಲಿನಿಂದ, ನಿರ್ಮಲ ಮತ್ತೊಂದು ಮಗ್ಗುಲಿನಿಂದ ಬರುವರು. ಕುಮಾರ ಕಟ್ಟೆಯನ್ನಿಳಿದು ಮುಂದೆ ಬಂದು ]

ಅತ್ತೆ ! ಅತ್ತ ನೋಡಬಾರದೇ, ಈ ಭವಿಗಳು ಮನೆಹೊಕ್ಕು ಭ್ರಷ್ಟಗೊಳಿಸುತ್ತಿರುವರು. ಭಕ್ತರ ಮನೆಯೆಂದೆಷ್ಟು ಹೇಳಿದರೂ ಕೇಳಲೊಲ್ಲರು.

**ಸುಮತಿ:**— ಎಲೊ, ಎಲೊ ! ಯಾರೊ ನೀವು ? ಹಗಲುಹಾಡೆ ಮನೆಹೊಗುವ ಪುಂಡರು.

**ಕುಮಾರ:**— ಮಹಾದೇವೀ, ನಮ್ಮ ಮಹಾದೇವಿಯನ್ನು ಎಳೆ-ದೊಯ್ಯ ಬಂದಿದ್ದಾರತ್ತೇ ಈ ಭಂಡರು.

**ನಿರ್ಮಲ:**—ಶಿವ ಶಿವಾ ! ಏನಿದು ? ಇಂಥ ಪುಂಡಾಟ-ಭಂಡಾಟ ಕೇಳುವವರೇ ಇಲ್ಲವೇ ಈ ರಾಜ್ಯದಲ್ಲಿ.

**ಕುಮಾರ:**— ಅವಿಚಾರಿಯಾದ ಅರಸು, ಅವಿವೇಕಿ ಮಂತ್ರಿಗಳು, ಉನ್ಮತ್ತ ಅಧಿಕಾರಿಗಳ ಆಳಿಕೆಯಲ್ಲಿ, ಕೇಳುವದೇನು—ಹೇಳುವದೇನು ? ಅವರು ಆಡಿದ್ದೇ ಶಾಸನ. ಮಾಡಿದ್ದೇ ನ್ಯಾಯ.

**ಅಧಿಕಾರಿ:**— ರಾಜದ್ರೋಹ, ರಾಜದ್ರೋಹ, ರಾಜದ್ರೋಹಿಗ-ಳಿವರು. ಹಿಡಿಯಿರಿ, ಎಲ್ಲರನ್ನೂ ಹೆಡಮುರಿಗೆ ಕಟ್ಟಿರಿ. ಹುಡುಕಿರಿ ಮಹಾ-ದೇವಿಯನ್ನು.

[ ಕೆಲಜನ ದೂತರು ಹಿಡಿಯಬರಲು ಗಲಭೆ ಏಳುವದು. ಕುಮಾರನು ಗಲಾಟೆಯಲ್ಲಿ ಜಾರಿಕೊಂಡು ಹೋಗುವನು. ]

[ ತೆರೆಬೀಳುವದು ]

## ಪ್ರವೇಶ ೪

ಸ್ಥಳ — ರಾಜಬೀದಿ. ಸಮಯ— ಮಧ್ಯಾಹ್ನ.

[ ಮಹಾದೇವಿ ಕೈಯ್ಯಲ್ಲಿ ಪತ್ರಿ ಪುಷ್ಪಾದಿಗಳಿಂದ ತುಂಬಿದ ಬುಟ್ಟಿ ಹಿಡಿದು ಬರುವಳು. ಎದುರು, ಕುಮಾರನು ಹಿಂದೆ ನೋಡುತ್ತ ಮುಂದುಮುಂದಾಗಿ ಓಡುತ್ತ ಬರುವ. ಅವನು ಗಾಬರಿಯಾಗಿ ಓಡುತ್ತ ಬರುತ್ತಿರುವಾಗ ತಲೆಯ ಮೇಲಿನ ರುಮಾಲವೆಲ್ಲಿಯೋ ಗೊತ್ತಿಲ್ಲದಂತೆ ಬಿದ್ದು ಹೋಗಿದೆ. ಉಟ್ಟ ಧೋತರದ ಹಿಂದಿನ ಕಚ್ಚೆ ಬಿಚ್ಚಿ ನೆಲಕ್ಕೆಳೆಯುತ್ತಿದೆ. ಮಹಾದೇವಿಯನ್ನು ಕಂಡು ತಟ್ಟನೆ ನಿಂತು, ಹಿಂದೆ ನೋಡುತ್ತ ]

**ಕುಮಾರ:—** ಬಂದರು....ಮಹಾದೇವಿ!..... ಬಂದರು....ಹಿಂದೇ ....ನನ್ನ ಬೆನ್ನು ಹತ್ತಿ ಬಂದರೆ....

**ಮಹಾದೇವಿ:—** (ನಿಂತು ಆಶ್ಚರ್ಯದಿಂದ) ಯಾರು ಬಂದರು? ಕುಮಾರಾ! ಹೀಗೇಕೆ? ನಿನ್ನ ಬೆಂಬತ್ತಿ ಬಂದವರಾರು?

**ಕುಮಾರ:—**(ಹಿಂದೆ ನೋಡಿ) ಅಯ್ಯ ಬಂದರೆ!.... ಇಲ್ಲೇ ಹಿಂದೆ ಬಂದರು.... ಓಡು, ಓಡು.

**ಮಹಾದೇವಿ:—** ಇದೇನು ಕುಮಾರಾ! ಎಲ್ಲಿಗೋಡಲಿ ನಾನು?

**ಕುಮಾರ:—**ಎಲ್ಲಿಗೋಡಲಿ! ಎಲ್ಲಿಯಾದರೂ ಓಡಿ ಹೋಗೇ ... ಓಡಿ ಹೋಗು.

**ಮಹಾದೇವಿ:—** ಬಿಚ್ಚಿ ಹೇಳದೆ ನೀನು ಹೀಗೇಕೆ ಹುಚ್ಚನಂದದಿ ಮಾಳ್ಪೆ.

**ಕುಮಾರ:—**ಇನ್ನೆಲ್ಲಿ ಬಿಚ್ಚಿ ಹೇಳಲಿ?... ಬಿಚ್ಚಿ ಹೇಳುತ್ತ ನಿಲ್ಲುವದರೊಳಗೆ.... ಆ ರಾಜದೂತರು ಬಂದರೆಂದರೆ.... ನನ್ನ ನಿನ್ನ ಹುಚ್ಚು ಬಿಟ್ಟು ನಿಚ್ಚಳವಾದೀತು ನಡೆ.... ಮಹಾರಾಯಳೇ! ಮೊದಲು ಕಾಲ್ಕಿಡು.

**ಮಹಾದೇವಿ:** (ಅತ್ತಿತ್ತ ನೋಡಿ) ರಾಜದೂತರು!

**ಕುಮಾರ:—** ಹೌದು ರಾಜದೂತರು .... ಅವರಿವರಲ್ಲ. ಪ್ರತ್ಯಕ್ಷ ಕೌಶಿಕ ದೊರೆಯಿಂದ ಕಳಿಸಲ್ಪಟ್ಟವರು. ಇಲ್ಲೇ ನನ್ನ ಹಿಂದೇ ಬಂದರು... ಓಡು, ಓಡು.

**ಮಹಾದೇವಿ:**—ಆ ರಾಜದೂತರೇಕೆ ನಿನ್ನ ಬೆಂಬತ್ತಿ ಬರುತ್ತಿಹರು ?

**ಕುಮಾರ:**— ಆ ರಾಜದೂತರು, ನನ್ನ ಬೆನ್ನು ಹತ್ತಿ ಬಂದೇನು ಬಳಿದುಕೊಂಡಾರೇ! ನಿನ್ನನ್ನು ಹುಡಕುತ್ತ ಬರುತ್ತಿರುವರು ನಿನ್ನನ್ನು. ಹೂಂ, ಓಡು ಓಡು. ಎತ್ತಾದರೂ ಕಣ್ಣು ತಪ್ಪಿಸಿ ಓಡಿ ಹೋಗೇ!

**ಮಹಾದೇವಿ:**- (ಗಾಬರಿ ಆಶ್ಚರ್ಯಗಳಿಂದ) ಎನ್ನನು ಹುಡುಕುತಿಹರೇ ? ಅದೇಕೆ ?

**ಕುಮಾರ:**— ಅದೇಕೆ - ಇದೇಕೆ ! ಸುಂದರಿಯಾದ ನಿನ್ನಂಥ ಹೆಣ್ಣನ್ನು ಹುಡುಕುವದೇತಕ್ಕೆ ಮಣ್ಣು ತಿಳಿಯುವದಿಲ್ಲವೆ? ನಿನ್ನನ್ನು ಎತ್ತಿಕೊಂಡು ಹೋಗುವದಕ್ಕೆ. ಎತ್ತಿಕೊಂಡು ಹೋಗಿ ಆ ಕೌಶಿಕ ಮಹಾರಾಜನ ಕೂಡ ಮದುವೆ ಮಾಡಲಿಕ್ಕೆ. ಗೊತ್ತಾಯ್ತೇ ಈಗಾದರೂ? ಇನ್ನಾದರೂ ಓಡಿ ಹೋಗು ನೋಡೋಣ. ಅಯ್ಯ! ಮತ್ತೇ ನಿಂತು ಬಿಟ್ಟಿಯಲ್ಲೇ? ಅತ್ತೆ ಮಾವಂದಿರಂತೆ ನೀನೂ ಅವರ ಕೈಯ್ಯಲ್ಲಿ ಸಿಕ್ಕು ಬಿಟ್ಟಿಯೇ? ನಿನ್ನನ್ನೂ ಎಳೆದೊಯ್ದಾರು.

**ಮಹಾದೇವಿ:**— (ಗಾಬರಿಯಾಗಿ ಮುಂದೆ ಬಂದು) ಏನು! ಆ ರಾಜದೂತರುಗಳೆನ್ನ ತಾಯ್ತಂದೆಗಳನೆಳೆದೊಯ್ದರೇ ?

**ಕುಮಾರ:**— ಹೌದೇ, ನೀನು ಸಿಕ್ಕಲಿಲ್ಲೆಂದು ಅವರನ್ನೇ ಎಳೆದೊಯ್ದರು. ಮಹಾದೇವೀ! ಮಾತು ಬೆಳೆಸುತ್ತ ನಿಂತರೆ ಅನಾಯಾಸವಾಗಿ ನೀನೂ ಅವರ ಕೈಯ್ಯಲ್ಲಿ ಸಿಕ್ಕು ಬಿಟ್ಟೀಯೇ, ಓಡು, ಓಡು.

[ ಮಹಾದೇವಿ ದಿಙ್ಮೂಢಳಂತೆ ನಿಂತು ಬಿಡುವಳು ]

ಹಾಂ! ಏನಾಯಿತು ನಿನಗೆ? ಹೀಗೇಕೆ ನಿಂತುಕೊಂಡೆ? ದೆವ್ವಗಿವ್ವ ಬಡಿಯಿತೇನೇ? ಹೀಗೇಕೆ ಮಾಡುವಿ ಓಡಿ ಹೋಗೇ? ಮಹಾರಾಯಳೇ! ನಿನ್ನ ಕಾಲನ್ನಾದರೂ ಹಿಡಿದುಕೊಳ್ಳಲಾ ಏನು ಮಾಡಲಿ? ಓಡೇ ಓಡು.

[ ಮಹಾದೇವಿ ಮನಸ್ಸಿನಲ್ಲಿ ಏನೋ ನಿರ್ಧರಿಸಿದಂತೆ ಮಾಡಿ ಮುಂದೆಯೇ ಹೋಗ ಹತ್ತುವಳು. ]

ಇದೇನು! ಮುಂದೆ ಹೋಗುವಿಯಲ್ಲ? ಅತ್ತಲ್ಲ, ಹಿಂದಿರುಗು. ಹಿಂದಿರುಗಿ ಓಡೇ.

[ ಮಹಾದೇವಿ ಅವನ ಮಾತಿಗೆ ಕಿವಿಗೊಡದೆ ಹೋಗುತ್ತಲು ಕುಮಾರನು ಅಸಮಾಧಾನದಿಂದ ]

ಹೀಗೇಕೆ ಮಾಡುವಿಯೋ ನೀನು ? ಮಹಾದೇವಿ! ಅದೇ ದಾರಿಯಿಂದ ಬಂದರೇ ಆ ರಾಜದೂತರು. ಹಿಂದಿರುಗು, ಹಿಂದಿರುಗಿ ಹೋಗು.

[ ಅಷ್ಟಕ್ಕೂ ಮಹಾದೇವಿ ಹಿಂದಿರುಗದ್ದಕ್ಕೆ ಕುಮಾರನು ಓಡಿ ಮುಂದೆ ನಿಂತು ]

ಏನಿದು ! ಹುಚ್ಚುಗಿಚ್ಚು ಹಿಡಿಯಿತೇನೇ ನಿನಗೆ? ಎಷ್ಟು ಹೇಳಿದರೂ ಮುಂದೆ ಮುಂದೆ ಹೋಗುತ್ತಿರುವಿ, ರಾಜದೂತರ ಕೈಯ್ಯಲ್ಲಿ ಸಿಕ್ಕು ಬೀಳಬೇಕೆಂದಿರುವಿಯೋ ಏನು ?

**ಮಹಾದೇವಿ:**—(ನಿಂತು ನಿರ್ಧಾರದ ಸ್ವರದಿಂದ) ಅಹುದು. ನಾನವರ ಕೈಯ್ಯಲಿ ಸಿಕ್ಕು ಬೀಳಲೆಂದೇ ಮುಂದೆ ಹೋಗುತಲಿಹೆನು.

**ಕುಮಾರ:**— ಏನು! ನೀನಾಗಿಯೇ ಆ ರಾಜದೂತರ ಕೈಯ್ಯಲ್ಲಿ ಸಿಕ್ಕು ಬೀಳುವಿಯಾ ?

**ಮಹಾದೇವಿ:**— ತಂದೆತಾಯಿಗಳ ಕಷ್ಟವನು ಕಳೆಯಲೆಂದೀಗ ನಾನು ಬಂಧಿತಳಾಗುತಲಿರುವೆ.

**ಕುಮಾರ:**— ನೀನಾಗಿಯೇ ಅವರ ಕೈಯ್ಯಲ್ಲಿ ಸಿಕ್ಕಮೇಲೆ, ಹಾಗೇ ಬಿಟ್ಟಾರೇನೇ ಕೌಶಿಕದೊರೆಯಬಳಿಗೆ ಎಳೆದೊಯ್ಯದೆ?

**ಮಹಾದೇವಿ:**— ಎಳೆದೊಯ್ಯಲಿ.

**ಕುಮಾರ:**— ಎಳೆದೊಯ್ಯಲಿ ! ಎಳೆದೊಯ್ದ ಮೇಲೆ ಆ ದೊರೆ ನಿನ್ನಂಥ ಸುಂದರಿಯನ್ನು ನೋಡಿ ಸುಮ್ಮನಿದ್ದಾನೇ, ಬಲಾತ್ಕಾರದಿಂದ ಮದುವೆಯಾದರೆ ?

**ಮಹಾದೇವಿ:**— ಶಿವನ ಸಂಕಲ್ಪವಂತಿದ್ದರಾರು ಮಾಡುವದೇನು ?

**ಕುಮಾರ:**— ನೀನು ಮದುವೆಯಾಗಿ ಬಿಡುವಿಯಾ ? ನೀನು ಮದುವೆಯಾಗಿ ಹೋದರೆ ನನ್ನ ಗತಿ ?

**ಮಹಾದೇವಿ:**— ದೇವನಿಹನಲ್ಲವೇ ?

**ಕುಮಾರ:**— ಅಲ್ಲೆ ! ನನ್ನ ಮದುವೆಯ ಗತಿಯೇನು ಅನ್ನುವೆ ?

**ಮಹಾದೇವಿ:—** ಎಲ್ಲದಕೆ ದೇವನೊಬ್ಬನೇ ಗತಿಯೆಂದು ನಂಬು-ವದು. (ಹೋಗಹತ್ತುವಳು)

**ಕುಮಾರ:—** ಎಲ್ಲದಕ್ಕೂ ದೇವರೇ ಗತಿಯೆಂದರೆ! ಆ ದೇವರನ್ನೇ ಮದುವೆಯಾಗಬೇಕೇ ಹೇಗೆ?

**ಮಹಾದೇವಿ:—** ( ಹೋಗುತ್ತ ಅವನನ್ನು ನೋಡಿ ) ಆ ಭಾಗ್ಯ, ನಿನಗಾಭಾಗ್ಯವಿದೆಯೇ ಕುಮಾರಾ ?

**ಕುಮಾರ:** ನನಗೆ ಆ ಭಾಗ್ಯ, ಈ ಭಾಗ್ಯ, ಯಾವ ಭಾಗ್ಯವೂ ಬೇಡೇ. ನೀನೇ ಎನಗೆ ಭಾಗ್ಯ. ಮಹಾದೇವೀ ! ಹೋಗಬೇಡೇ— ಹೋಗಬೇಡ.

[ತೆರೆಯೊಳಗೆ "ಇಲ್ಲೇ ಇರುವರು. ಹಿಡಿಯಿರಿ ಬಿಡಬೇಡಿ ಬಿಡಬೇಡಿ." ಎಂದು ಕೋಲಾಹಲ ಕೇಳಬರುವದು. ಮಹಾದೇವಿ ಶಾಂತ ಗಂಭೀರವಾಗಿ ಒಂದೊಂದೇ ಹೆಜ್ಜೆ ಮುಂದೆ ಹಾಕುವಳು. ಕುಮಾರನು ದುಃಖವಿಹ್ವಲನಾಗಿ]

ಅಯ್ಯೋ! ಬಂದೇ ಬಿಟ್ಟರಲ್ಲಾ. ಮಹಾದೇವಿ! ಮಹಾದೇವಿ!! ಇನ್ನೆಲ್ಲಿ, ಇನ್ನೆಲ್ಲಿ ನನಗೆ ಮಹಾದೇವಿ.

[ಅಳಹತ್ತುವ. ತೆರೆ ಬೀಳುವದು]

( ಎರಡನೇ ಅಂಕ ಮುಗಿದುದು. )

# ಅಂಕ ೩

## ಪ್ರವೇಶ ೧

ಸ್ಥಳ—ಕೌಶಿಕನ ವಿಲಾಸಮಂದಿರ. ಸಮಯ—ಸಾಯಂಕಾಲ.

[ ಮಂದಿರವು ಕಲಾಪೂರ್ಣವಾದ ವಿಗ್ರಹಗಳಿಂದಲೂ, ಸುಂದರವಾದ ಬಣ್ಣ ಬಣ್ಣದ ಚಿತ್ರಗಳಿಂದಲೂ, ಅಂದವಾದ ಕನ್ನಡಿಗಳಿಂದಲೂ ತುಂಬಿ, ಸುಂದರವಾಗಿ ಕಾಣುತ್ತಿದೆ. ಮಂದಿರದಲ್ಲಿ ಅಲ್ಲಲ್ಲಿ ಕುಳಿತುಕೊಳ್ಳಲು ಆಸನಗಳೂ, ಮಲಗಲು ಮಂಚಗಳೂ ಇರುವವಲ್ಲದೆ ಮಧ್ಯದಲ್ಲೊಂದು ವಿಲಾಸ ಯೋಗ್ಯವಾದ ಉಯ್ಯಾಲೆಯು ತೂಗುತ್ತಿದೆ. ಮಂದಿರದ ಎಡಬಲಗಳಲ್ಲಿ ಬಾಗಿಲುಗಳಿದ್ದು ಎದುರಿನಲ್ಲೊಂದು ವಿಶಾಲವಾದ ಕಿಟಕಿ ಇದೆ. ಮಹಾದೇವಿ ಕಿಟಕಿಯಲ್ಲಿ ಕುಳಿತು ಆಕಾಶದ ಕಡೆಗೆ ಎವೆಯಿಕ್ಕದೆ ನೋಡುತ್ತ ಕಣ್ಣೀರಿಡುತ್ತಲಿದ್ದಾಳೆ ಅವಳ ಹಿಂದೆ ಸ್ವಲ್ಪ ಅಂತರದ ಮೇಲೆ ಇದ್ದ ಒಂದಾಸನದಲ್ಲಿ ಫಲಾಹಾರದ ತಟ್ಟೆಗಳೂ, ನೀರಿನ ಕಲಶ ಬಟ್ಟಲಗಳೂ, ಹೂ ತಾಂಬೂಲ ಸುಗಂಧ ದ್ರವ್ಯಾದಿ ಸಾಹಿತ್ಯಗಳಿವೆ. ಮಹಾದೇವಿ ಕಣ್ಣೀರಿಡುತ್ತ]

**ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವನೆನೆವಂತೆ ನೆನೆವೆನಯ್ಯಾ ।**
**ಬಂಧನಕೆ ಬಂದ ಗಿಳಿ ತನ್ನ ಬಂಧುವನೆನೆವಂತೆ ನೆನೆವೆನಯ್ಯಾ ।**
**ಕಂದ ನೀನಿತ್ತಬಾ ಎಂದು ನಿಮ್ಮಂದವ ತೋರಾ ಚೆನ್ನಮಲ್ಲಿಕಾರ್ಜುನಾ ॥**

[ ಅಷ್ಟರಲ್ಲಿ ಚಪಲೆಯುಂಬೋರ್ವ ದಾಸಿ ಕೈಯ್ಯಲ್ಲಿ ವಸ್ತ್ರಾಭರಣಗಳ ತಟ್ಟೆ ಹಿಡಿದುಕೊಂಡು, ಮಹಾದೇವಿಯ ಹಿಂಭಾಗದ ಬಾಗಿಲಿನಿಂದ ಬಂದು ಫಲಾಹಾರದ ತಟ್ಟೆಗಳನ್ನು ಕುತೂಹಲದಿಂದ ನೋಡುತ್ತ ]

**ಚಪಲೆ:—** ಹಾಂ! ಇದರಲ್ಲಿ ಒಂದಾದರೂ ಹಣ್ಣನ್ನು ತಿಂದಂತಿಲ್ಲ.

[ ಬೇರೆ ತಟ್ಟೆಗಳನ್ನು ನೋಡುತ್ತ ]

ಛೇ! ಯಾವ ಫಲಾಹಾರದ ತಟ್ಟೆಯಲ್ಲೂ ಕೈಯ್ಯನ್ನೇ ಇಟ್ಟಿಲ್ಲ.

[ತಲೆಯೆತ್ತಿ ಮಹಾದೇವಿಯನ್ನು ನೋಡಿ, ಮುಂದೆ ಹೋಗಿ ಅವಳ ಹಿಂದೆ ನಿಂತು]

ಅದೇಕೆ ದೇವೀ ! ಫಲಾಹಾರವನ್ನೇ ಮುಟ್ಟಿಲ್ಲ ?

[ ಮಹಾದೇವಿ ಮೌನವಾಗಿರಲು, ಚಪಲೆ ಸುತ್ತಿಹ್ಹು ಮುಂದೆ ಹೋಗಿ ಅವಳ ಮುಖ ನೋಡುತ್ತ ಆಶ್ಚರ್ಯದಿಂದ ]

ಇದೇನು ದೇವೀ! ಅಳುತ್ತಿರುವಿಯಲ್ಲ ?

[ ತನ್ನ ಮಗ್ಗಲಲ್ಲಿಯೇ ತಟ್ಟೆಯನ್ನಿಟ್ಟು ಕಟ್ಟೆಯ ಮೇಲೆ ಕುಳಿತು ]

ಏಕೆ, ಅಳುತ್ತಿರುವಿಯೇಕೆ ? ಏನಾಯಿತು ದೇವೀ ?

[ಮಹಾದೇವಿ ಮುಖದಿರುವಿ ಚಪಲೆಯನ್ನೊಮ್ಮೆ ಅಶಾಂತದೃಷ್ಟಿಯಿಂದ ನೋಡಿ, ಉಸುರ್ಗರೆದು ಮತ್ತೆ ಮುಖವನ್ನು ನೋಡಲಿಸಂತೆ ಆಕಾಶದ ಕಡೆಗೆ ತಿರುಗಿಸುವಳು]

ಮಹಾರಾಜರ ಪ್ರೀತಿಯ ರಾಣಿಯಾಗಲು ಬಂದ ಪುಣ್ಯವಂತಿ ನೀನು, ನಿನಗೇಕೆ ದುಃಖತೆಗೆದೇವೀ ? ಏಳು, ಮಹಾರಾಜರು ಬರುವ ಹೊತ್ತಾಗಿದೆ ಏಳು. ಈ ಹೊಸ ಸೀರೆಯನ್ನುಡಿಸಿ, ಆಭರಣಗಳನ್ನಿಡಿಸುವೆ ಏಳು.

[ ಮಹಾದೇವಿಯ ತಲೆ ಕೂದಲು ನೋಡುತ್ತ ]

ಅಯ್ಯೆ ! ಮುಡಿ ಬಿಚ್ಚಿ ತಲೆ ಹೇಗೆ ಹೆಡಿಗೆಯಂತಾಗಿವೆಯಲ್ಲಾ !

[ ಎದ್ದು ನಿಲ್ಲುತ್ತ ]

ತಡೆ ದೇವೀ ! ಮೊದಲು ತಲೆಗೆ ಸುಗಂಧದೆಣ್ಣೆಯನ್ನುಜ್ಜಿ, ಚೆನ್ನಾಗಿ ಬಾಚಿ ಜಡೆ ಹಾಕುವೆ ತಡೆ.

[ ಅವಸರದಿಂದ ಹೋಗಿ ಅಲ್ಲಿಯೇ ಒಂದಾಸನದಲ್ಲಿದ್ದ ಎಣ್ಣೆ, ಹಣಿಗೆ, ಕನ್ನಡಿಗಳನ್ನು ತಕ್ಕೊಂಡು ಬಂದು ಕಟ್ಟೆಯ ಮೇಲಿಟ್ಟು, ಅವಳ ಕೂದಲಕ್ಕೆ ಕೈಸೇಡುತ್ತ ]

ಕೂದಲುಗಳಾದರೂ ಎಷ್ಟು ಉದ್ದಾಗಿವೆಯಲ್ಲಾ ? ಹದ ಮಾಡಿದ ರೇಸಿಮೆಯಂತೆ ಬಲು ಮಿದುವಾಗಿವೆ. ಅಹಹಾ ! ಜಡೆ ಹಾಕಿ ಮುಡಿಗಟ್ಟಿ ಬಿಟ್ಟರೆ ಮಹಾರಾಜರ ಕಣ್ಣುಗಳು ಸೆರೆಯಲ್ಲಿಟ್ಟಂತೆ ಅಲ್ಲಿಯೇ ಸುತ್ತುತಿರಬೇಕು ನೋಡಿ.

[ ಮಹಾದೇವಿ ಮುಖದಿರುವುತ್ತ ]

**ಮಹಾದೇವಿ:—** ಬೇಡ, ಬೇಡ. ಜಡಿ ಮುಡಿ ಯಾವುದೂ ಬೇಡೀಗ ಬಿಡು.

**ಚಪಲೆ:—** ಯಾವುದೂ ಬೇಡ ! ಅಂದರೆ, ಎಣ್ಣೆಯುಜ್ಜುವದು ಬೇಡ, ಬಾಚುವದು ಬೇಡ, ಜಡೆ ಹಾಕುವದು ಬೇಡ. ಇದಾವುದೂ ಬೇಡವೇ ಬೇಡವೇನು ?

**ಮಹಾದೇವಿ:—** ಬೇಡ.

**ಚಪಲೆ:—** ಇದಾವುದೂ ಬೇಡಾದರೆ, ದೇವೀ! ಆ ನಿನ್ನ ಮಾಸಿದ ಸೀರೆಯನ್ನಾದರೂ ಬಿಡಿಸಿ, ಈ ಹೊಸ ಸೀರೆಯನ್ನುಡಿಸುವೆ ಏಳು. ನೋಡು ದೇವೀ, ಈ ಸೀರೆ ಎಷ್ಟು ನಯವಾಗಿದೆ ನೋಡಿದಿಯಾ? ಈ ನಸುಗಪ್ಪು ನಿನ್ನ ಮೈಬಣ್ಣಕ್ಕಂತೂ ಬಲು ಒಪ್ಪುವದು ನೋಡು.

[ ತಟ್ಟಿಯೊಳಗಿನ ಸೀರೆಯನ್ನೆತ್ತಿ ಮಡಿಕೆ ಬಿಚ್ಚುತ್ತ ]

ದೇವಿ! ಇದನ್ನುಟ್ಟು ಮಹಾರಾಜರೆದುರು ಸುಳಿದಾಡಿದರೆ, ಅವರು ನಿನ್ನನ್ನು ಬಿಟ್ಟು ಮಹಾರಾಣಿಯನ್ನು ಕಣ್ಣೆತ್ತಿ ನೋಡಿದರೆ ಕೇಳು. ಏಳು ದೇವೀ ಹೊತ್ತಾಗಿದೆ. ಮಹಾರಾಜರೆಲ್ಲಾದರೂ ಬಂದುಗಿಂದಾರು ಏಳು.

**ಮಹಾದೇವಿ:—** ಉಡದ ಸೀರೆಯನೇಕೆ ಬಿಚ್ಚುಡುವೆ ಬಿಡು.

**ಚಪಲೆ:—** ಏನು! ಈ ಸೀರೆಯನ್ನೂ ಉಡುವದಿಲ್ಲವೇ?

**ಮಹಾದೇವಿ:—** ಇಲ್ಲಾ.

**ಚಪಲೆ:—** ಜಡೆ ಹಾಕಿಸಿಕೊಳ್ಳಲಿಲ್ಲಾ, ಹೊಸ ಸೀರೆಯನ್ನೂ ಉಟ್ಟುಕೊಳ್ಳಲಿಲ್ಲ. ಕಡೆಗೆ ಈ ಆಭರಣಗಳನ್ನಾದರೂ ಇಟ್ಟುಕೊಳ್ಳು-ವಿಯೋ ಇಲ್ಲವೋ ದೇವೀ?

[ಮಹಾದೇವಿಯ ದುಃಖಪೂರಿತವಾದ ಮುಖದಲ್ಲೊಮ್ಮೆ ಚಪಲೆಯ ಮುಗ್ಧತೆಗೆ ಮುಗುಳ್ನಗೆ ಮಿಂಚುವದು ]

**ಮಹಾದೇವಿ:—** ಆಭರಣಗಳಾದರೂ ಏಕೆ ಬೇಕೀಗ?

**ಚಪಲೆ:—** ದೇವೀ! ಅವೇಕೆ ಬೇಕು, ಇವೇಕೆ ಬೇಕೆಂದು, ಉಡು ತೊಡುವದನ್ನು ಬಿಟ್ಟು, ಸುದಾಮನ ಮಡದಿಯಂತೆ ಕಾಣುವ ಈ ಸುಡು-ಗಾಡು ವೇಷದಲ್ಲಿ, ಮಹಾರಾಜರು ನಿನ್ನನ್ನು ನೋಡಿ ವಿರಸಗೊಂಡರೆ?

[ ಚಪಲೆ ಬಂದ ಬಾಗಿಲಿನಿಂದಲೇ ಕೌಶಿಕ ದೊರೆ ನಗುತ್ತ ಬಂದು ]।

**ಮಹಾದೇವಿ:—** ವಿರಸವೇಕಿದಕೆ ಚಪಲೇ? ಸುಂದರಿಯರನಾವ ವೇಷದಿ ಕಂಡರೂ, ಅದು ತಾ ಹರುಷವೇ ರಸಿಕರಿಗೆ. ರತ್ನವನು ಕುಂದಣದಿ ಕೆಚ್ಚದೆ ಬಿಚ್ಚಿ ಬಯಲಲಿಟ್ಟರೆ, ಅದ ಕಂಡು ಕಲ್ಲೆಂದಲ್ಲಗಳೆವವರಾರು?

ಚಪಲೇ! ಲಾವಣ್ಯ ಖಣಿಯದು ತಾನೆ ಪೆಣ್ರೂಣಿಯಾಗಿ, ಎನ್ನ ಪುಣ್ಯ-ದಿಂದಿಲ್ಲಿ ಬಂದಿಹುದು ನೋಡು. ಆಹಹಾ! ಧನ್ಯ ಧನ್ಯ. ಈ ಸುಂದರಿಯ ಪಡೆವ ನಾ ಧನ್ಯನಿಂದು.

[ ಉದ್ರೇಕದಿಂದರಸು ಮಹಾದೇವಿಯು ಮುಟ್ಟ ಹೋಗುವನು. ಚಪಲೆ ನಾಚಿ ತಲೆತಗ್ಗಿಸಿಕೊಂಡು ಮುಗುಳ್ನಗೆ ನಗುತ್ತ ಹೊರಟು ಹೋಗುವಳು. ಮಹಾದೇವಿ ಗಾಬರಿಯಾಗಿ ಎದ್ದು ದೂರ ಸರಿಯುತ್ತ ]

**ಮಹಾದೇವಿ:—** ಮುಟ್ಟದಿರು, ಮುಟ್ಟದಿರೆನ್ನನು ಅರಸೇ!

[ ಕೌಶಿಕ ಮೂಢನಂತೆ ನಿಂತು ಮಹಾದೇವಿಯನ್ನು ನೋಡುತ್ತ ]

**ಕೌಶಿಕ:—** ಮುಟ್ಟದಿರಲೇ? ತರುಣೀ! ನಿನ್ನ ಸುಂದರ ರೂಪ-ವೆನ್ನ ನ್ಯೆಮನಗಳನು, ಗಟ್ಟಿಯಾಗೆಳೆಯುತಿರೆ ನಾನು ಮುಟ್ಟದಿರಲೆಂತು? ಹಸಿದವನ ಎದುರಿನಲಿ ಪಂಚಪಕ್ವಾನ್ನಗಳಿರಲು, ಬೇಡಬೇಡೆಂದರವನ-ದನು ತಿನ್ನದಿಹನೇ ಮರುಳೇ? ಮಹಾದೇವಿ! ನಿನ್ನಂಥ ಸುಂದರಾಂಗಿ-ಯನಪ್ಪಿ ಮುದ್ದಿಸದ ಈ ದೇಹ, ಜೀವದಿಂದಿದ್ದೇನು ಫಲ ಹೇಳು?

[ ಮಹಾದೇವಿಯ ಹತ್ತರ ಹೋಗಹತ್ತಲು ಅವಳು ಅಂಜಿ ಸರಿಯುತ್ತ ]

**ಮಹಾದೇವಿ:—** ತಡೆ, ತಡೆ. ಅವಿಚಾರಕೆಡೆಯಾಗದಿರು.

[ ಮಂದಿರದಲ್ಲಿದ್ದ ಗೊಂಬೆಗಳ ತೋರುತ್ತ ]

ನೋಡು, ನೋಡೀ ಮಂದಿರವನಂದಗೊಳಿಸಿಹ ಪೆಣ್ಬೊಂಬೆಗಳ ಸೌಂದ-ರ್ಯದಲೇನು ಕುಂದಿದೆ ನೋಡು. ಜಗದ ಸೌಂದರ್ಯವನೊಂದುಗೂಡಿಸಿ ಮೂರ್ತಿಮಾಡಿಲ್ಲಿರಿಸಿದಂತಿಹುದಲ್ಲವೇನರಸೇ? ಈ ಸುಂದರ ಬೊಂಬೆಗಳ ನೆಂದಾದರೂ ಅಪ್ಪಿ ಆನಂದಿಸಿರುವಿಯಾ ಹೇಳು?

[ ಕೌಶಿಕ ಗೊಂಬೆಗಳನ್ನು ಉದಾಸೀನತೆಯಿಂದ ನೋಡಿ ]

**ಕೌಶಿಕ:—** ಜೀವವಿಲ್ಲದ ಬೊಂಬೆ. ಸೌಂದರ್ಯವೊಂದಿದ್ದರೇ-ನಾಯ್ತು? ರಮಣೀ! ಅವುಗಳಂದದಿ ನೀನು ನಿರ್ಜೀವ ಬೊಂಬೆಯೇ ಅಪ್ಪಿದರೆ ಆನಂದವಾಗದಿರುವದಕೆ?

[ ಮನದಲ್ಲೇನೋ ಹೊಳೆದುದರಿಂದ ಗೋಣುಹಾಕಿ ]

ಅಹುವಹುದು. ನೀನೊಂದೆ ನಿಜವಹುದು. ಜೀವ ಸೌಂದರ್ಯಗಳೊಂ-ದೊಡಗೂಡಿ ನಡೆಮಾಡುತಿಹ ಬೊಂಬೆ. ಸ್ವರ್ಗ! ಸ್ವರ್ಗ!! ಎಲ್ಲಿಹುದು ಆ ಸ್ವರ್ಗ, ಮಹಾದೇವಿ! ನೀ ಸುಳಿವ ಸ್ಥಳವೇ ಸ್ವರ್ಗ. ಎಂದೆಂದಿಗೂ ನಿನ್ನ ಬಾಹುಗಳ ಬಂಧನದಿ ಬಿಡದಿಹುದೆ ಆನಂದ ?

[ ಉದ್ರೇಕಗೊಂಡು ಕೌಶಿಕನು ಮತ್ತೆ ಮಹಾದೇವಿಯನ್ನಪ್ಪ ಹೋಗಲು ಮಹಾದೇವಿ ಮತ್ತೊಂದೆಡೆ ಸರಿದುಹೋಗಿ ಶಾಂತವಾಗಿ ನಿಂದ ]

**ಮಹಾದೇವಿ:—** ನಿಲ್ಲು, ನಿಲ್ಲಬಲೆಯರು ಛಲದಿಂದ ಬಲದಿಂದ ಒಲಿವರೆಂದೆಂಬಿಯೇನರಸೇ? ಪ್ರೇಮವಿಲ್ಲದ ಪ್ರಣಯವೆಂದರದು ತಾ, ಪೆಣದೊಡನೆ ಪೆಣದೊಡನೆ ಸರಸವಾಡಿದಂತಿಹುದು.

[ ಕೌಶಿಕ ಚಿಂತೆಗೊಳ್ಳದಂತಾಗಿ ತನ್ನೊಳಗೆ ]

**ಕೌಶಿಕ:—** ಪ್ರೇಮ! ಪ್ರೇಮ!!

[ ಮಹಾದೇವಿಯನ್ನುದ್ದೇಶಿಸಿ ದೈನ್ಯದಿಂದ ]

ಎನ್ನಲಿ ಪ್ರೇಮವಿಲ್ಲವೆ ನಿನಗೆ? ಮಹಾದೇವಿ! ಪ್ರೇಮವಿಲ್ಲೆಂಬುದಕೆ ನಾನು ಅಂದಗೇಡಿಯೇ ನೋಡು. ಬಹುಕಾಲ ವಿಷಯಸುಖಭೋಗಿಸಲು ನವಯೌವ್ವನವು ಎನಗೆ ತಾನುಂಟು. ಬೇಡಿದೊಡವೆಗಳ ತಡೆಯದೆ ಕೊಡಬಲ್ಲ ಈ ಭೂಪನಲಿ, ಏನು ಕುಂದಿಹುದೆಂದು ಪ್ರೇಮವಿಲ್ಲೆಂದಾಡು-ತಿಹೆ ನೀನು ?

**ಮಹಾದೇವಿ:—** ನಿನ್ನಲಿ ಕುಂದಿರುವದೆಂದಲ್ಲ. ನಿನಗೆ ಕೊಡಲಾ ಪ್ರೇಮವೇ ಎನ್ನಲಿಲ್ಲರಸೇ! ಪ್ರೇಮವನುರಾಗಗಳನಾದೇವನಲ್ಲಿರಿಸಿ ವಿರಾಗಿಯಾಗಿಹೆ ನಾನು.

[ ಕೌಶಿಕ ಉಪಹಾಸಪೂರ್ವಕ ನಕ್ಕು ]

**ಕೌಶಿಕ:—** ವಿರಾಗಿ, ಮಹಾದೇವಿ! ಈ ಜಗದಿ ಸುಖವು ಸಿಗದಿರೆ ಜನರು, ಯಾರು ಕಂಡರಿಯದಾ ಪರಲೋಕ ಸುಖವನು ನೆಚ್ಚಿ, ಹುಚ್ಚ-ರಂದದಿ ವೈರಾಗ್ಯ, ವೈರಾಗ್ಯವೆಂದಲೆಯುತಿಹರು. ಮುಗ್ಧೆ! ಮೂರ್ಖರಾಡುವಾ ಕಲ್ಪನೆಯ ದೇವನ ಬಿಟ್ಟು ಪ್ರೇಮವನು ಎನ್ನಲಿಟ್ಟರೆ, ಸಿಗದ ಸುಖವ-ದಾವುದು ನಿನಗೆ? ಬಾ ರಮಣೀ! ನಾವೀರ್ವರೊಂದಾಗಿ, ಆ ಕಲ್ಪನೆಯ ಸ್ವರ್ಗಕೂ ಮಿಗಿಲಾದ ಸುಖದ ಸಾಮ್ರಾಜ್ಯವನಿಲ್ಲಿ ಕಟ್ಟೋಣ ಬಾ ಇನ್ನು.

[ ಮಹಾದೇವಿ ಅತ್ತಿತ್ತ ಸರಿದಾಡಲು ಬರದಂಥ ಇಕ್ಕಟ್ಟಿನಲ್ಲಿರಲು, ಕೌಶಿಕ ಮೆಲ್ಲಮೆಲ್ಲನೆ ಮುಂದೆ ಹೋಗತೊಡಗುವ. ಮಹಾದೇವಿ ಕಳವಳದಿಂದ ]

**ಮಹಾದೇವಿ:—** ಬೇಡ, ಬೇಡರಸೇ ! ಅನ್ಯಾಯವಾಗೆನ್ನನು ಮುಟ್ಟಿ ವ್ರತ ಭ್ರಷ್ಟಗೊಳಿಸಲು, ನಿನಗೆ ಪಾಪವದು ತಟ್ಟುವದು ಖಂಡಿತವು, ಖಂಡಿತವು.

[ ಕೌಶಿಕ ತಿರಸ್ಕಾರದಿಂದ ನಗುತ್ತ ]

**ಕೌಶಿಕ:—** ಪಾಪ ! ಎನಗೆ ಪಾಪ ತಟ್ಟುವದೇ ? ತಟ್ಟಲಿ. ಮುಂದಿನ ಪಾಪಕಂಜಿ ಸುಂದರೀ ! ನಿನ್ನನು ಪಡೆವ ಈ ಪುಣ್ಯವನಿಂದು ಬಿಟ್ಟು-ಬಿಡಲೇ ? ಛೀ !

[ಕೌಶಿಕನವಳ ಅಪ್ಪಹೋಗುವ. ಮಹಾದೇವಿ ನಿರಾಶೆಯಿಂದ ಉಸುರ್ಗರೆದು ಆಕಾಶದ ಕಡೆಗೊಮ್ಮೆ ನೋಡಿ ದುಃಖಿತಳಾಗಿ]

**ಮಹಾದೇವಿ:—** ಶಿವ, ಶಿವ.

[ಮಹಾದೇವಿ ಮೈಹುದುಗಿಸಿಕೊಂಡು ಕೈಯಿಂದ ಕಣ್ಣು ಮುಚ್ಚಿಕೊಳ್ಳುವಳು. ಕೌಶಿಕ" ಮಹಾದೇವಿಯನ್ನಪ್ಪಬೇಕೆಂದು ತೋಳ್ಗಳೆರಡನ್ನೂ ಮುಂದೆ ಮಾಡಲು "ಕಡ್ ಕಡ್ ಕಡಲೆಂದು ಸಿಡಿಲೆರಗುವದು. ಕೌಶಿಕ ಬೆಟ್ಟಬಿದ್ದು ಅಂಜಿ ಹಿಂದೆ ಸರಿಯುವನು. ಅಷ್ಟರಲ್ಲಿ ತೆರೆಯಲ್ಲಿ ದೊಪ್ಪೆಂಬ ಸಪ್ಪಳದೊಂದಿಗೆ "ಹಾ" ಎಂಬ ಆರ್ತನಾದವೂ, ಸ್ತ್ರೀಯರ "ಅಯ್ಯಯ್ಯ" ಎಂಬ ಚೀತ್ಕಾರವೂ ಕೇಳ ಬರುವದು. ಕೌಶಿಕ ಇದೇನೆಂದು ಓಂದಿರುಗಿ ಅತ್ತಿತ್ತ ನೋಡತೊಡಗಲು ಕಂಚುಕಿ ಅವಸರದಿಂದ ಬಂದು ಗಾಬರಿಗೊಂಡವನಂತೆ]

**ಕಂಚುಕಿ:—** ಮಹಾರಾಜರೇ ! ಮಹಾರಾಜರೇ !!

[ ಕೌಶಿಕನು ಆಶ್ಚರ್ಯದಿಂದ ಮುಂದೆ ಬಂದು ]

**ಕೌಶಿಕ:—** ಏನಾಯ್ತು ಕಂಚುಕೀ ! ಏನಾಯ್ತು ?

**ಕಂಚುಕಿ:—** ನಿರ್ಮಲಶ್ರೇಷ್ಠಿ, ಮಹಾಸ್ವಾಮಿ ! ಆ ನಿರ್ಮಲ-ಶ್ರೇಷ್ಠಿ............

[ ಮಹಾದೇವಿ ಕಣ್ದೆರೆದು ಆತುರ ಆನುತಾಪಗಳಿಂದ ಮುಂದೆ ಬಂದು ]

**ಮಹಾದೇವಿ:—** ಏನು ನಿರ್ಮಲಶ್ರೇಷ್ಠಿ ! ಏನಾಯಿತಾತನೆ ?

**ಕಂಚುಕಿ:—** ಸಿಡಿಲಿನ ರಭಸಕ್ಕೆ ಬೆಟ್ಟಬಿದ್ದು ಮೆಟ್ಟಲುಗಳಿಂದ ಕಾಲುಜಾರಿ............

[ ಮಹಾದೇವಿಯು ಮುಖದಲ್ಲಾದ ದುಃಖಾತಿರೇಕ ನೋಡಿ ಕಂಚುಕಿಗೆ ಮುಂದೆ ಮಾತಾಡಲು ಬರದೆ ನೆಲಕ್ಕೆ ಬಿದ್ದನೆಂದು ಕೈಸನ್ನೆ ಮಾತ್ರ ಮಾಡುವ ]

**ಕೌಶಿಕ:—** ನೆಲಕ್ಕುರುಳಿದನೆ?

**ಕಂಚುಕಿ:—** ನೆಲಕ್ಕುರುಳಿದ್ದನಷ್ಟೇ ಏಕೆ? ತಲೆಯೊಡೆದು ಸ್ಮೃತಿಯಿಲ್ಲದೆ ಬಿದ್ದಿದ್ದಾನೆ ದೊರೆಗಳೇ?

[ ಮಹಾದೇವಿ ದುಃಖಾತಿರೇಕದಿಂದ "ಅಯ್ಯೋ" ಎಂದು ಚೀರಿ ಬಾಗಿಲ ಕಡೆಗೆ ಓಡಿ ಹೋಗಹತ್ತಲು ಕೌಶಿಕ ಅವಳನ್ನು ತಡೆದು ವಿಕಟ ಹಾಸ್ಯಗೈಯುತ್ತ ]

**ಕೌಶಿಕ:—** ನಿಲ್ಲು, ಎಲ್ಲಿಗೋಡುವೆ ನಿಲ್ಲು.

[ ಕಂಚುಕಿಯು ಕಡೆಗೆ ತಿರುಗಿ ಕ್ರುದ್ಧ ಕಂಠದಿಂದ ]

"ಕಂಚುಕೀ! ಆ ನಿರ್ಮಲನಿಗೆ ಉಪಚಾರ ಗೈಯ್ಯದಲೀಗ, ಸೆರೆಮನೆಗೊಯ್ಯಲು ಹೇಳು. ಅನ್ನ ನೀರುಗಳ ಕೊಡಕೂಡದೆಂದೊಡೆಯಾ ಕಟ್ಟಾಜ್ಞೆ ಮಾಡಿರುವನೆಂದರುಹು ನಡೆ"

( ಕಂಚುಕಿ ಅನುಮಾನದಿಂದ ತಿರುತಿರುಗಿ ಅರಸನನ್ನು ನೋಡುತ್ತ ಖಿನ್ನತೆಯಿಂದ ಹೋಗುವನು. ಮಹಾದೇವಿ ದುಃಖಾತಿರೇಕದಿಂದ "ಅಯ್ಯೋ" ಎಂದು ಚೀರಿ ನೆಲಕ್ಕೆ ಬೀಳುವಳು. ಅರಸನು ಅವಳನ್ನು ಹಿಡಿದೆಬ್ಬಿಸ ಹೋಗಲು ತೆರೆಯಲ್ಲಿ "ಬೆಂಕಿ ಬೆಂಕಿ, ಓಡು. ಹೊರಗೋಡು" ಎಂದು ಗಲಭೆ ಏಳುವದು. ಅರಸು ಗಾಬರಿಯಾಗಿ ಅತ್ತಿತ್ತ ನೋಡತೊಡಗುವನು. ಬಾಗಿಲಿನಿಂದ ದೂತರು, ದಾಸಿಯರು, ಮಾನಿನಿಯೇ ಮೊದಲಾದವರು ಓಡಿ ಬರುವರು ಬಾಗಿಲಿನಿಂದ ಹೊಗೆ ನುಗ್ಗುವದು. ಉರಿ ಕಾಣುವದು. ಮಂದಿರವು ಹೊಗೆಯಿಂದ ಮುಚ್ಚಲು ಅರಸು ಮೊದಲಾದವರು ಗಾಬರಿಯಾಗಿ ಬೇರೊಂದು ಬಾಗಿಲಿನಿಂದ ಓಡಿ ಹೋಗುವರು. ಮಹಾದೇವಿ ಗದ್ದಲಕ್ಕೆದ್ದು ಕುಳಿತುಕೊಂಡು ಅತ್ತಿತ್ತ ನೋಡುತ್ತಿರಲು ಮಾನಿನಿ ಅವಳ ಹತ್ತಿರ ಬಂದು. "

**ಮಾನಿನಿ:—** ನಡೆ, ನಡೆ ಮಹಾದೇವಿ! ಇದೆ ಸಮಯ, ಬಿಡುಗಡೆ ಮಾಡುವೆನು ನಡೆ ನಿನ್ನ.

[ ಮಾನಿನಿ, ಕೈಹಿಡಿದು ಮಹಾದೇವಿಯನ್ನೆಬ್ಬಿಸ ಹೋಗಲು, ಮಹಾದೇವಿ ಆಶ್ಚರ್ಯದಿಂದವಳ ನೋಡತೊಡಗುವಳು. ]

" ಸಂದೇಹದಿಂದೇನು ನೋಡುವಿಯೆನ್ನ ? ಮಹಾದೇವಿ ! ಈ ಗದ್ದಲದಿ ಸದ್ದಿಲ್ಲದಂದದಿ ನಿನ್ನ ಸೆರೆ ಬಿಡಿಸುವೆನು ನಡೆ ಇನ್ನು.

[ ಮಹಾದೇವಿ ನಿರಾಶೆಯಿಂದ ಉಸುರ್ಗರೆವು ]

**ಮಹಾದೇವಿ:—** ಬಿಡುಗಡೆ, ಬಿಡುಗಡೆ. ಎನ್ನ ಬಿಡುಗಡೆಯಾಗ್ವವೆ ಇನ್ನು ?

**ಮಾನಿನಿ:—** ಎನ್ನಲಿನ್ನೂ ಸಂಶಯವೆ? ನೋಡು, ನೋಡಲ್ಲಿ ಮಹಾದೇವಿ! ಸುತ್ತಲೂ ಹೊತ್ತುತಿದೆ ಬೆಂಕಿ. ಅಯ್ಯೋ! ಹೊಗೆ ಮುಸುಗಿತೀ ಮಂದಿರದಿ. ಏಳೇಳು ಮಹಾದೇವಿ, ತಡಮಾಡದೇಳೇಳು.

[ ಮಹಾದೇವಿ ಏನೂ ತೋಚದೆ ಮಾನಿನಿಯನ್ನೇ ನೋಡತೊಡಗಲು ]

" ಇದೇನು ಹಾಳು ಸಂಶಯವೇಳು? ಅಯ್ಯೋ! ಎನ್ನ ಪ್ರಾಣಕೂ ಪ್ರಿಯನಾದ ಪತಿಯ ಪಾದವ ಸ್ಮರಿಸಿ ಪೇಳುವೆನು. ನೀನೆನ್ನ ಧರ್ಮಭಗಿನಿ ಎದ್ದೇಳು.

[ ಮಹಾದೇವಿ ದುಃಖಕೃತಜ್ಞತೆಯಿಂದ ಮಾನಿನಿಗೆ ತೆಕ್ಕೆಬಿದ್ದು ]

**ಮಹಾದೇವಿ:—** ಇಲ್ಲಿಲ್ಲ ಸಾಧ್ವೀ! ನಿನ್ನಲಿ ಸಂಶಯಗೊಳ್ಳಲಿಲ್ಲಾನು. ಸತಿಯರ ಸತ್ಯವಚನದಲೆನಗೆ ಸಂಶಯವೇ ಶಿವ ಶಿವಾ !

**ಮಾನಿನಿ:—** ಮತ್ತೇನು, ಮತ್ತೇನು ಸಂಶಯವು ಮಹಾದೇವಿ ?

[ ಮಹಾದೇವಿ ನಿರ್ನಿಂಬಿದ ಕಣ್ಣುಗಳಿಂದ ಮಾನಿನಿಯನೋಡುತ್ತ ದುಃಖದಿಂದೊಂದೊಂದೆ ಮಾತಗಳನ್ನಾಡುವಳು. ]

**ಮಹಾದೇವಿ:—** ಎನ್ನ ತಾಯ್ತಂದೆ,....ಎನ್ನ ತಾಯ್ತಂದೆಗಳು.... ಎನಗಾಗಿ,....ಎನಗಾಗಿ ಅಲ್ಲಿ. ಸೆರೆಮನೆಯಲ್ಲಿ ನೆರಳುತಿರೆ, ನಾನು... ಪಾಪಿ,.... ಬಿಡುಗಡೆಯಾಗೆಲ್ಲೋಡಿ ಹೋಗಲಿ ಹೇಳು.

[ ಜಿಗುಪ್ಸೆಯಿಂದ ಗೋಣು ಹಾಕುತ್ತ ]

" ಬೇಡ, ಬೇಡ. ಸುಖದ ಬಾಳುಗಳ ಹಾಳು ಮಾಡುತಲಿರುವ ಈ ಪಾಪಿ ರೂಪವು ಉಳಿವುದಕಿಂತ, ಉರಿಯಲಿ ಬೆಂದು ಅಳಿವುದೇ ಲೇಸು.

**ಮಾನಿನಿ:—** ಅವಿಚಾರ, ಅವಿಚಾರವಿದೇನು ಮಹಾದೇವಿ! ನಿನ್ನ ತಂದೆ ತಾಯ್ಗಳನಿಂದು ರಾತ್ರಿಯಲಿ ನಾನು ಸೆರೆಯಿಂದ ಬಿಡಿಸುವೆನು.

ಅಯ್ಯೋ! ಈ ಮಂದಿರಕ್ಕು ಬೆಂಕಿ ತಗುಲಿತು. ನಡೆ ನಡೆ ಮಹಾದೇವಿ, ಮತ್ತೊಂದೆಡೆಯಲಿ ನಿಂತು ಮಾತಾಡೋಣ ನಡೆ ಇನ್ನು.

[ ಮಹಾದೇವಿಯ ಕೈಹಿಡಿದು ಮಾನಿನಿ ಬಲವಂತದಿಂದೆಳೆಯುವಳು. ಮಹಾದೇವಿ ಆಶ್ಚರ್ಯ ಕೃತಜ್ಞತೆಗಳಿಂದವಳ ಮುಖ ನೋಡುತ್ತ ]

**ಮಹಾದೇವಿ:—** ಎನ್ನ ಮೊರೆ ಕೇಳಿ, ದಯೆಯಿಂದ ಬಿಡಿಸಲು ಬಂದ ನೀನಾರು, ನೀನಾರು ದೇವಿ?

[ ಮಾನಿನಿ ದುಃಖದಿಂದೊಂದು ದೀರ್ಘಶ್ವಾಸ ಬಿಟ್ಟು ]

**ಮಾನಿನಿ:—** ನಾನಾರು! ನಾನಾರು!! ನಿನ್ನನು ಸಂಕಟದಿ ಬಳಲಿಸುತಿರುವ ಈ ರಾಜನ ರಾಣಿ. ದುರ್ದೈವಿ, ದುರ್ದೈವಿ.

[ ಮಾನಿನಿ ಮುಖ ಸೆರೆ ಮಾಡಿ ಮಹಾದೇವಿಯನ್ನು ಬಾಗಿಲದ ಕಡೆಗೆ ಕರೆದೊಯ್ಯುವಳು.

( ತೆರೆ ಬೀಳುವದು ).

## ಪ್ರವೇಶ ೨.

ಸ್ಥಳ— ಸೆರೆಮನೆಯ ಮುಂದಿನ ಭಾಗ— ಸಮಯ ರಾತ್ರಿ

[ ಮೋಡಕವಿದು ಕತ್ತಲಾಗಿದೆ. ಆಗಾಗ ಮಿಂಚುತ್ತಿದೆ. ಗುಡುಗಿನ ಸಪ್ಪಳ ವಾಗುತ್ತಿದೆ. ಯಾವಾಗಾದರೊಂದೊಂದು ಹನಿ ಉದುರುತ್ತಿದೆ. ಸೆರೆಮನೆಯ ಭದ್ರವಾದ ಬಾಗಿಲಿನ ಮಗ್ಗಲು ಗೋಡೆಯ ಮಾಡದಲ್ಲೊಂದು ದೀಪಿಗೆ ಢಾಳಾಗಿ ಉರಿಯುತ್ತಿದೆ. ಆ ದೀವಿಗೆಯ ಬೆಳಕಿನಲ್ಲೊಬ್ಬ ಕಾವಲುಗಾರನು ಯೋಚನಾ-ಪರನಾಗಿ ಅತ್ತಿಂದಿತ್ತ ಅಡ್ಡಾಡಿ ಕಾವಲು ಮಾಡುತ್ತಲಿದ್ದಾನೆ. ಅವನ ಕೈಯ್ಯಲ್ಲಿ ಭಾಲೆ, ನಡುವಿನಲ್ಲಿ ಕತ್ತಿ ನೇತಾಡುತ್ತಿದೆ. ಮಾನಿನಿ ಚತುರಿಕೆಯರು ಮೈಗೆಲ್ಲ ಮುಸುಕು ಹಾಕಿಕೊಂಡು ಮೆಲ್ಲಗೆ ಬರುವರು. ಕಾವಲುಗಾರನು ಅವರನ್ನು ಕಂಡು ಚಮಕಿತನಾಗಿ ನಿಂತು ದರ್ಪದಿಂದ ]

**ಕಾವಲುಗಾರ:—** ಯಾರವರು? ನಿಲ್ಲಿ.

[ ಭಾಲೆಯನ್ನು ಅವರಿಗೆ ಗುರಿಯಿಟ್ಟು ಮುಂದೆ ಬರುತ್ತಿರಲು ಚತುರಿಕೆ ಮುಸುಕು ತೆಗೆದು ಸನ್ನೆ ಮಾಡುತ್ತ ]

**ಚತುರಿಕೆ:—** ಸುಮ್ಮನಿರು, ಮಹಾರಾಣಿಯವರು. ಗದ್ದಲ ಮಾಡ ಬೇಡ.

[ ಕಾವಲುಗಾರನು ತಟ್ಟನೆ ಭಾಲೆ ಹಿಂತೆಗೆದುಕೊಂಡು ಪಶ್ಚಾತ್ತಾಪದಿಂದ ]

**ಕಾವಲುಗಾರ:—** ತಪ್ಪಾಯ್ತು, ತಪ್ಪಾಯ್ತು. ಗೊತ್ತಾಗಲಿಲ್ಲ.

[ ಮಾನಿನಿಯ ಕಡೆಗೆ ನೋಡುತ್ತ ವಿನಯದಿಂದ ಪ್ರಣಾಮ ಮಾಡಿ ]

" ಮಹಾರಾಣಿಯವರು ಈ ಸೇವಕನ ತಪ್ಪನ್ನು ಕ್ಷಮಿಸಬೇಕು "

[ ಚತುರಿಕೆ ಅತ್ತಿತ್ತ ನೋಡಿ ಮರೆಯಿಂದ ಚೀಲ ಹೊರತೆಗೆದು ]

**ಚತುರಿಕೆ:—** ಇದೋ! ಹಿಡಿ, ಹಿಡಿ. ಹೊತ್ತಾಗುವದು.

[ ಕಾವಲುಗಾರನು ಅದನ್ನು ನೋಡಿ ತಕ್ಕೊಳ್ಳದೆ ಕೈ ಜೋಡಿಸಿ ವಿನಯದಿಂದ ]

**ಕಾವಲುಗಾರ:—** ನಾನು-ನಾನು, ಮಹಾರಾಣಿಯವರ ಬಡ ಸೇವಕ.

**ಚತುರಿಕೆ:—** ನೀನು ಬಡವನೆಂದೇ ಉಡಿತುಂಬ ಹೊನ್ನು ಕೊಟ್ಟಿದ್ದಾರೆ ಮಹಾರಾಣಿಯವರು. ಹಿಡಿ, ಹಿಡಿ.

**ಕಾವಲುಗಾರ:—** ಅಲ್ಲ ಅಮ್ಮಣ್ಣಿಯವರೇ, ನನಗೆ ಮಕ್ಕಳುಮರಿಗಳು ಬಹಳಾSSS

**ಚತುರಿಕೆ:—** ಸಾವಿರ ಹೊನ್ನು, ಅಲ್ಪ ಸ್ವಲ್ಪವಲ್ಲ. ನಿನ್ನ ಮಕ್ಕಳು ಸಾಯುವ ವರೆಗೆ ತಿಂದರೂ ಸವಿಯುವದಿಲ್ಲ. ಮತ್ತೆಷ್ಟು ಆಶೆ ಹಿಡಿ ಹಿಡಿ. ತೆಗೆದುಕೋ.

**ಮಾನಿನಿ:—** ತಡೆ ತಡೆ, ಚತುರಿಕೆ! ಪಾಪ ಬಡವನೆಂದವನು ಬಹಳ ಗೋಳಿಡುತಿಹನು.

[ ಕೊರಳೊಳಗಿನ ಸರ ಬಿಚ್ಚಿ ಚತುರಿಕೆಗೆ ಕೊಡುತ್ತ ]

ಈ ಮುತ್ತಿನ ಸರವನಾದರೂ ಕೊಟ್ಟು ಬಿಡವಗೆ.

**ಕಾವಲುಗಾರ:—** ಅಲ್ಲಲ್ಲ, ಮಹಾರಾಣಿಯವರೇ! ಆಶೆ-ಗೀಶೆಯಿಂದಲ್ಲ.

[ ವಿಷಾದದಿಂದೊಮ್ಮೆ ಉಸುರ್ಗರೆದು ]

ಹುಟ್ಟಿ ಬೆಳೆದ ಊರು. ಮಕ್ಕಳುಮರಿ ಕಟ್ಟಿಕೊಂಡು ಹೇಗೆ ಬಿಟ್ಟು ಹೋಗಲೀ ಅನ್ನುತ್ತೇನೆ.

**ಚತುರಿಕೆ:—** (ತಿರಸ್ಕಾರದಿಂದ) ಹುಟ್ಟಿ ಬೆಳೆದ ಊರು. ಹುಟ್ಟಿ ಬೆಳೆದ ಈ ಊರಲ್ಲೇನು ನಿನಗಾಗಿ ಸುಖ ಒಟ್ಟಿದೆಯೋ? ಹಗಲು ರಾತ್ರಿ

ಕಷ್ಟಪಟ್ಟು ದುಡಿದರೆ ಹೊಟ್ಟೆ ತುಂಬ ಅನ್ನ ಸಿಗುವದಾದರೂ ಅಷ್ಟ-ರೊಳಗೇ ಇದೆ. ಹುಟ್ಟಿದೂರಂತೆ ಹುಟ್ಟಿದೂರಲ್ಲಿ ಹೊಟ್ಟೆಕಟ್ಟಿ ಬಡತನದಲ್ಲಿ ಬಳಲುವದಕ್ಕಿಂತ ಬೇರೂರಿಗೆ ಹೋಗಿ, ತಿಂದುಂಡು ಸುಖದಿಂದಿರುವದು ನೆಟ್ಟಗಲ್ಲವೇನೋ? ಆ ಹುಚ್ಚುತನ ಸಾಕು ಮಹಾರಾಣಿಯವರು ಮಳೆಯಲ್ಲಿ ನಿಂತಿದ್ದಾರೆ ಕಾಣದೇ? ಹಿಡಿ, ಹಿಡಿ.

[ ಕಾವಲುಗಾರನು, ಚತುರಿಕೆಯ ಮುಖವನ್ನು ಮರುಳನಂತೆ ನೋಡುತ್ತ, ಚೀಲ ಸರಗಳನ್ನು ತಕ್ಕೊಂಡು ಮತ್ತೊಮ್ಮೆ ಪ್ರಣಾಮ ಮಾಡಿ ]

**ಕಾವಲುಗಾರ:—** ಮಹಾರಾಣಿಯವರು ಕಡೆತನಕ, ಕಡೆತನಕ ಈ ಬಡಸೇವಕನನ್ನು ಮರೆಯದಿದ್ದರಾಯಿತು.

**ಚತುರಿಕೆ:—** ಅದು ಹೇಗೆ ಮರೆತಾರೋ? ಕೊಡು, ಕೊಡು. ಸೆರೆಮನೆಯ ಕೀಲಿಯ ಕೈ ಕೊಟ್ಟು ನೀನು ಬೇಗ ಓಡಿ ಹೋಗು. ತಡೆದು ಗಿಡದೀ. ಮಹಾರಾಜರಿಗೆ ಗೊತ್ತಾದರೆ ನಿನ್ನ ತಲೆ ಉಳಿಯಲಿಕ್ಕಿಲ್ಲ. ಬೆಳಗಾಗುವದರೊಳಗಾಗಿ ಊರು ಬಿಟ್ಟು ಹೆಂಡರುಮಕ್ಕಳೊಡನೆ ಪಾರಾ-ಗಿರಬೇಕು.

**ಕಾವಲುಗಾರ:—** ಹಾಗೇ, ಹಾಗೇ ಮಾಡುತ್ತೇನೆ ಅಮ್ಮಣ್ಣಿ-ಯವರೇ!

[ ಕೀಲಿಯ ಕೈ ಕೊಟ್ಟು ಅತ್ತಿತ್ತ ನೋಡಿ ಓಡಿ ಹೋಗುವನು. ಚತುರಿಕೆ ಮಾನಿನಿಯರು ಮುಂದೆ ಬಂದು ಸೆರೆಮನೆಯ ಬಾಗಿಲು ತೆರೆಯುತ್ತಿರಲು, ಗೋಡೆಯ ಮೇಲೆ ಬೆಳಕು ಬಿದ್ದುದನ್ನು ಕಂಡು ಗಾಬರಿಯಾಗಿ ತಿರುಗಿ ನೋಡುವರು. ಚತು-ರಿಕೆಯ ಮುಖವು ವಿಕೃತವಾಗುವದು. ಭೀತಿಯಿಂದ ಮಾನಿನಿಯು ಕೈಯನ್ನು ಹಿಡಿದು ನಡುಗುತ್ತ ]

**ಚತುರಿಕೆ:—** ಮಹಾರಾಜರು ದೇವೀ! ಮಹಾರಾಜರು.

[ ಮಾನಿನಿ ಭೀತಿಗೊಂಡು ಅವಸರದಿಂದ ಚತುರಿಕೆಯನ್ನೆಳುಗಿಸುತ್ತ ]

**ಮಾನಿನಿ:—** ಅಯ್ಯೋ! ಮುಂದೇನು, ಮುಂದೇನು ಗತಿ ಇನ್ನು?

[ ಚತುರಿಕೆ ಅತ್ತಿತ್ತ ನೋಡಿ ]

**ಚತುರಿಕೆ:—** ನಡೆ ನಡೆ, ದೇವೀ! ಇಲ್ಲೇ ಎಲ್ಲಾದರೂ ಕತ್ತಲಲ್ಲಿ ಅಡಗೋಣ ನಡೆ. ಮುಂದೆ, ಮುಂದೆ ದೇವರು ಮಾಡಿಸಿದ್ದಾಗಲಿ.

( ಓಡಿ ಹೋಗಿ ಅಡಗಿ ನಿಲ್ಲುವರು. ದೀವಿಗೆಯು ಬೆಳಕಿನಲ್ಲಿ ಕೌಶಿಕ ದೊರೆ ಮೃಗಾವಲಿನ ಭಟರೊಂದಿಗೆ ಬರುವ. ಕೌಶಿಕ ನಿಂತು ಅತ್ತಿತ್ತ ನೋಡುತ್ತ )

**ಕೌಶಿಕ:**— ಹಾ! ಎಲ್ಲಿ? ಕಾವಲುಗಾರನೆಲ್ಲಿಹನು? ನಿದ್ದೆಮಾಡು-ತಲವನು ಎಲ್ಲಾದರೂ ಬಿದ್ದಿಹನೇ?

( ಮೃಗಾವಲಿನವನೊಬ್ಬ ಮುಂದೋಡಿ ಹೋಗಿ ಸೆರೆಮನೆಯ ಕೀಲೆ ತೆಗೆ-ದಿರುವದನ್ನು ಕಂಡು, ನಿಂತು ಅತ್ತಿತ್ತ ನೋಡುತ್ತ )

**ಮೃಗಾವಲಿನವ:**— ಬೆಳಕು, ಬೆಳಕು ತಾ ಇಲ್ಲಿ. ಯಾರೋ ಕತ್ತಲಲ್ಲಿ ಅಡಗಿ ನಿಂತಂತಿದೆ.

[ ಮೃಗಾವಲಿನವ ಮೆಲ್ಲನೆ ಮುಂದೆ ಹೋಗುತ್ತಿರಲು, ಅರಸು ಮೊದಲಾ-ದವರು ಅವನನ್ನು ಅನುಸರಿಸಿ ಹೋಗುವರು. ಮೃಗಾವಲಿನವ ಚತುರಿಕೆಯ ಸಮೀಪಕ್ಕೆ ಹೋಗಿ ಮುಸುಕು ತೆಗೆಯುತ್ತ ]

ಯಾರು ನೀನು?

[ ಮುಸುಕು ತೆಗೆಯಲು ಚತುರಿಕೆ ಭೀತಿಯಿಂದ ನಡುಗುತ್ತ ತಲೆ ತಗ್ಗಿಸಿ ನಿಲ್ಲುವಳು ಕೌಶಿಕ ಮುಂದೆ ಬಂದು ಅವಳನ್ನು ನೋಡಿ ಆಶ್ಚರ್ಯದಿಂದ ]

**ಕೌಶಿಕ:**—ಯಾರು? ಚತುರಿಕೆ! ಏಕೆ? ನೀನೇಕೆ ಅಡಗಿ ನಿಂತಿಹೆ ಇಲ್ಲಿ? ಏನು, ಏನು ತಂತ್ರ ಮಾಡಲೆಂದಿಲ್ಲಿಗೋರ್ವಳೆ ಬಂದಿರುವೆ ಈ ರಾತ್ರಿಯಲಿ?

[ ಭಟನು ಅತ್ತಿತ್ತ ನೋಡಿ ಮಾನಿನಿಯ ತೋರುತ್ತ ]

**ಭಟ:**— ಅದುನೋಡಿ, ಅದುನೋಡಿ ಮಹಾಪ್ರಭೋ! ಇವಳ ಸಂಗಡಿಗರಾರೋ ಮತ್ತೊಬ್ಬರಿದ್ದಂತಿದೆ.

( ಕೌಶಿಕ ಮಾನಿನಿಯ ಕಡೆಗೆ ನೋಡುತ್ತ )

**ಕೌಶಿಕ:**— ನೋಡು, ನೋಡು. ಮತ್ತಾರಿವಳ ಸಂಗಡಿಗರಾ-ಗಿಹರು?

( ಭಟನು ಮಾನಿನಿಯ ಹತ್ತರ ಹೋಗುವದು ಕಂಡು, ಚತುರಿಕೆ ಗಾಬರಿ-ಯಾಗಿ ತೊದಲಿಸುತ್ತ )

**ಚತುರಿಕೆ:**— ಬೇಡ... ಬೇಡ. ಅವರು...ಅವರು...ಮಹಾರಾ... ಮಹಾರಾಣಿ.

( ಭಟನು ಸ್ತಂಭಿತನಾಗಿ ನಿಲ್ಲುವ. ಕೌಶಿಕ ಅತ್ಯಂತ ಆಶ್ಚರ್ಯದಿಂದ )

**ಕೌಶಿಕ**— ಯಾರು? ಯಾರವಳು? ಮಹಾರಾಣಿ! ಮಾನಿನಿ!!

( ಮಾನಿನಿ ಮುಂದೆ ಬಂದು ಮುಸುಕು ತೆಗೆಯುತ್ತ )

**ಮಾನಿನಿ:**— ಅಹುದು ಮಾನಿನಿ.

( ಅರಸನನ್ನು ನೋಡಿ ಮುಖ ತಗ್ಗಿಸುವಳು. ಕೌಶಿಕ ಅವಳ ಹತ್ತರ ಬಂದು, ಹೆಗಲು ಹಿಡಿದು ಸಂತಾಪದಿಂದ )

**ಕೌಶಿಕ:**— ಮಾನಿನಿ!

( ಮಾನಿನಿ ಧೈರ್ಯಗೊಂಡು ಮುಖವೆತ್ತಿ ಅರಸನನ್ನು ನೋಡುತ್ತ )

**ಮಾನಿನಿ:**— ನಿನ್ನಲಿ ಮುಚ್ಚುಮರೆ ಮಾಡಲೇತಕಿನ್ನು ಇನಿಯಾ! ಸತ್ಯವನೆ ಹೇಳುವೆನು. ನಿರಪರಾಧಿ, ನಿರಪರಾಧಿಯಾಗಿಹ ಆ ಮಹಾದೇವಿಯ ತಂದೆ ತಾಯ್ಗಳನಿಂದು, ಸೆರೆಯಿಂದ ಬಿಡಿಸಲೆಂದಿಲ್ಲಿ ಬಂದಿಹೆವು.

( ಕೌಶಿಕ ಸಂತಾಪದಿಂದ ಮೆಟ್ಟಿಬಿದ್ದು ತುಟಿಕಚ್ಚಿ. ಮಾನಿನಿಯ ಭುಜವ ಸಲುಗಿಸುತ್ತ )

**ಕೌಶಿಕ:**— ಪಾಪಿ! ಪತಿದ್ರೋಹಿ!!

( ಮಾನಿನಿ ಅಭಿಮಾನಗೊಂಡು ಅರಸನನ್ನು ಬಿಡದೆ ನೋಡುತ್ತ )

**ಮಾನಿನಿ:**— ಅಲ್ಲಲ್ಲ. ಪಾಪಿ, ಪತಿದ್ರೋಹಿ ನಾನಲ್ಲ, ಪತಿಯನು ಪಾಪ ಪಂಕದಿಂದ ಉಳಿಸಬೇಕೆಂಬುದಿದು ಪಾಪವೆ? ಪತಿದ್ರೋಹವೇನು ಇನಿಯಾ!

**ಕೌಶಿಕ:**— ಮಾನಿನಿ! ಸತಿಯೆಂದು-ಸತಿಯೆಂದು ಸಹಿಸಿದಲಕೆ ಮಿತಿಯುಂಟು. ನೀನು—ನೀನು ಸತಿಧರ್ಮವನು ಅತಿಕ್ರಮಿಸುತಲಿರುವೆ.

**ಮಾನಿನಿ:**— ಇಲ್ಲಿಲ್ಲ ಎದೆಯರಸೇ! ಸತಿಧರ್ಮ ಚ್ಯುತಿಯಾಗದಂತೆ ಆಚರಿಸುತಿಹೆ ನಾನು. ಪತಿಯು ಪಾಪಕೂಪದಿ ಮುಳುಗುತಿರಲವನ ಉಳಿಸದಿಹ ಸತಿಧರ್ಮವೆಂತಹದು? ಆ ಸತಿಧರ್ಮ—ಆ ಸತಿಧರ್ಮವನು ಸ್ಮರಿಸಿ ನಿನಗೆ ಸೆರಗೊಡ್ಡಿ ಬೇಡುವೆನು.

( ನೆಲಕ್ಕೆ ಮಂಡೆಯೂರಿ ಸೆರಗೊಡ್ಡಿ ದೈನ್ಯದಿಂದ )

ಪರನಾರಿಯರನೆಳಸಿ ನೀನಿಂತು ಘೋರ ಕರ್ಮವ ಮಾಡದಿರು, ಮಾಡದಿರು. ಸಾಧ್ವಿಯರ ನಿಟ್ಟುಸುರಿನಿಂದೀ ರಾಜ್ಯವೈಭವವೆಲ್ಲ ನಷ್ಟವಾಗ್ವದು ರಮಣಾ!

( ಕೌಶಿಕ ಸಂತಾಪದಿಂದ ಮಾನಿನಿಯ ತಲೆ ಹಿಡಿದು ನೂಕುತ್ತ )

**ಕೌಶಿಕ:—** ಎನಗೆ ಉಪದೇಶಿಸಲು ನೀನಾರು, ನೀನಾರು ಎಲೆ ಹೆಣ್ಣೇ! ತೊಲಗತ್ತ.

( ಮಾನಿನಿ ಎದ್ದು ನಿಂತು ಅಭಿಮಾನ ಅನುತಾಪಗಳಿಂದ ಅರಸನನ್ನು ನೋಡುತ್ತ )

**ಮಾನಿನಿ:—** ನಾನಾರು! ನಾನಾರು!! ಗುರುಜನಗಳೆದುರಿನಲಿ, ಅಗ್ನಿದೇವನ ಸಾಕ್ಷಿಯಾಗಿಟ್ಟು, ಎನ್ನ ಕೈಪಿಡಿದುದನು ಮರೆತಿರುವಿಯೇನರಸೆ? ಕೇಳು, ಕೇಳ್ವಾನು ನಿನ್ನ ಅರ್ಧಾಂಗಿ. ನಿನ್ನ ಸುಖ ದುಃಖಕ್ಕೆ ಸಮಭಾಗಿ.

**ಕೌಶಿಕ:—** ಸಹಿಸೆ. ಮಾನಿನಿ! ಈ ನಿನ್ನ ಉದ್ಧಾಮತನವನು ಸಹಿಸೆ ನಾನಿನ್ನು. ಎನ್ನ ಕೆರಳಿಸದೆ ಸುಮ್ಮನೆ ತೆರಳು, ತೆರಳಿಲ್ಲಿಂದ

**ಮಾನಿನಿ:—** ಇಲ್ಲಿಲ್ಲ. ಆ ಮಹಾದೇವಿ ಮೊದಲಾದವರ ಬಿಡುವೆನೆಂದಭಯ ಪಡೆಯದಿಲ್ಲಿಂದ, ಒಂದಾದರಡಿಯನಿಡಲಾರೆ.

**ಕೌಶಿಕ:—** ಛಲವೇ! ಈ ಭೂಪನಲಿ ಛಲವಿಡಿಯಲದು ನಡೆವುದೇನಬಲೇ? ಭಟರೆ! ಎಳೆದೊಯ್ಯಿರಿ, ಎಳೆದೊಯ್ಯಿರೀ ಅಧಮಳನು ಅರಮನೆಗೆ. ಛಲದೋರಲಿ, ಎನ್ನಲಿ ಛಲದೋರ ಬಂದಿಹಳು.

( ಭಟರು ಮಾನಿನಿಯನ್ನು ಮುತ್ತುವರು. ಮಾನಿನಿ ಸುತ್ತಲು ನೋಡಿ ಸಂತಾಪದಿಂದ ಅರಸನಿಗೆ )

**ಮಾನಿನಿ:—** ಪತಿಯ ಪ್ರೇಮವಿಲ್ಲದ ಸತಿಯು ತಾನರಮನೆಯಲಿದ್ದೇನು ಸೆರೆಮನೆಗೆ ಬಿದ್ದೇನು? ಅರಸೆ! ಎನಗೆ ಅರಮನೆಯಲಿನ್ನೇನು, ಇನ್ನೇನು ಇಹುದಲ್ಲಿ. ಎಳೆಸೆಳೆಸು ಸೆರೆಮನೆಗೆ.

**ಕೌಶಿಕ:—** ನಿನಗಿನ್ನು ಅರಮನೆಯೆ ಸೆರೆಮನೆಯಾಗ್ವದವಿಚಾರಿ. ಭಟರೇ! ಎಳೆದೊಯ್ಯಿರೆನ್ನೆದುರಿನಿಂದೀರ್ವರನು.

**ಮಾನಿನಿ:—** ಅಳಿಗಾಲಕೆ ನಿನ್ನ ಮನವಿಂತು ದುಷ್ಕಾರ್ಯಕೆಳೆಸುತಿಹುದರಸೇ! ಅದಕೇನು ಮಾಡುವದು.

[ ಅರಸು ಮುಖದಿರುವಿ ಬಾಗಿಲದತ್ತ ಹೋಗತೊಡಗಲು, ಭಟರು ಮುಂದೆ ಬರುವರು. ಮಾನಿನಿ ದರ್ಪದಿಂದ ಭಟರಿಗೆ ]

ಜೋಕೆ. ಮೈಗೆ ಕೈಹಚ್ಚಿದರೆ ಜೋಕೆ, ಜೋಕೆ. ನಾವು ನಿಮ್ಮ ಬೆಂಬತ್ತಿ ಕರೆವತ್ತ ಬರುತಿಹೆವು ನಡೆಯಿರಿನ್ನೇಕೆ ?

[ ಮಾಸಿನಿ ಮೊದಲಾದವರು ದೀವಟಿಗೆಯ ಬೆಳಕಿನಲ್ಲಿ ಹೋಗುವರು. ಅರಸು ಸಂತಾಪದ ಭರದಲ್ಲಿ ಸೆರೆಮನೆಯ ಬಾಗಿಲದ ವರೆಗೆ ಹೋಗಿ ತಟ್ಟನೆ ನಿಂತು ಗೋಣು ಹಾಕಿ ]

**ಕೌಶಿಕ:**—ಅಹುದಹುದು. ನಾರಿಯರ ನೆಲೆಯನಾರು ಅರಿತಿಹರು ? ತಂತ್ರಗಾರ್ತಿ, ತಂತ್ರಗಾರ್ತಿಯರಿವರು.

[ ತಿರುಗಿ ನಿಂತು ]

ಭಟನಾಯಕಾ !

**ಭ. ನಾಯಕ:**—(ವಿನಯದಿಂದ ಬಗ್ಗಿ) ಆಜ್ಞೆಯೇನು ಜೀಯಾ ?

**ಕೌಶಿಕ:**— ಅರಮನೆಗೆ ನೀನೀಗಲೇ ಪೋಗಿ, ಮಹಾದೇವಿ—ಆ ಮಹಾದೇವಿ ಅಲ್ಲಿರುವಳಿಲ್ಲವೊ ನೋಡಿ ಬಾ ಬೇಗ.

**ಭ. ನಾಯಕ:**— ಅಪ್ಪಣೆ.

[ ಪ್ರಣಾಮ ಮಾಡಿ ಹೋಗುತ್ತಿರಲು ಕೌಶಿಕ ಏನೋ ವಿಚಾರಿಸಿದಂತೆ ಮಾಡಿ ]

**ಕೌಶಿಕ:**— ನಿಲ್ಲು, ಭಟನಾಯಕ ನಿಲ್ಲು.

[ ಭಟನಾಯಕ ತಿರುಗಿ ಬಂದು ವಿನಯದಿಂದ ಶಿರಬಾಗಿ ]

**ಭ. ನಾಯಕ:**— ಮತ್ತೇನಾಜ್ಞೆ ಜೀಯಾ ?

**ಕೌಶಿಕ:**— ಆ ಮಹಾದೇವಿ ಅರಮನೆಯೊಳಿರಲು, ಅವಳ ಕರೆದು ತಾ ಇಲ್ಲಿ.

[ ಭಟನಾಯಕ ಹೋಗುವ. ಅರಸು ತಿರುಗಿ ಸೆರೆಮನೆಯ ಕಡೆಗೆ ನಡೆಯುವ. ದೂತ ಮುಂದಾಗಿ ಬಾಗಿಲು ತೆಗೆಯತೊಡಗುವ.

[ ತೆರೆ ಬೀಳುವದು ]

## ಪ್ರವೇಶ ೩.

ಸ್ಥಳ—ಸೆರೆಮನೆಯ ಒಳಭಾಗ. ಸಮಯ—ಮಧ್ಯರಾತ್ರಿ.

[ ನಿರ್ಮಲನು ಬರಿನೆಲದಲ್ಲಿ ಸುಮತಿಯ ತೊಡೆಯ ಮೇಲೆ ತಲೆ ಇಟ್ಟು ಕಣ್ಣು ಮುಚ್ಚಿ ನರಳುತ್ತ ಮಲಗಿದ್ದಾನೆ. ಕೈಕಾಲು ತಲೆಗಳಿಗಾದ ಗಾಯಗಳಿಂದ ಅವನು ಬಹಳ ಸೋತಿದ್ದಾನೆ ಅಲ್ಲಲ್ಲಿ ಗಾಯಗಳಿಗೆ ಬಟ್ಟೆಯ ತುಂಡುಗಳನ್ನು ಕಟ್ಟಿರುವದರಿಂದಂತೂ ಮೊದಲೇ ಮುಪ್ಪಿನಿಂದ ವಿಕಾರವಾಗಿರುವ ಅವನ ಮುಖವು ಮತ್ತಿಷ್ಟು ವಿಕೃತವಾಗಿದೆ. ಆಕಸ್ಮಿಕವಾದೀ ವಿಪತ್ತಿನಿಂದ ಸುಮತಿ ಹೌಹಾರಿ ಹುಚ್ಚಳಂತೆ ನಿರ್ಮಲನನ್ನೇ ನೋಡುತ್ತ ನಡುನಡುವೆ ದುಃಖಪೂರ್ಣವಾದ ದೀರ್ಘಶ್ವಾಸ ಬಿಡುತ್ತ ಕುಳಿತಿದ್ದಾಳೆ. ಆಗಾಗ ತನ್ನ ಸೆರಗಿನಿಂದ ಗಾಳಿ ಹಾಕುತ್ತಿರುವಳು. ಭಯಾನಕವಾದ ಸೆರೆಮನೆಯಲ್ಲಿರುವ ಆ ದುರ್ದೈವಿಗಳಾದ ದಂಪತಿಗಳ ಮೇಲೆ ಮಿಣಮಿಣಯಾಗಿ ಉರಿಯುತ್ತಲಿರುವ ದೀಪದ ಮಂದವಾದ ಬೆಳಕು ಬಿದ್ದು, ನೋಡುವವರಲ್ಲಿ ಭಯ-ಕರುಣೆಗಳನ್ನುಂಟು ಮಾಡುತ್ತಲಿದೆ. ನಿರ್ಮಲನು ನರಳುತ್ತ ಕುಗ್ಗಿದ ಸ್ವರದಲ್ಲಿ ]

**ನಿರ್ಮಲ:—** ನೀರು........ನೀರು.

[ ಸುಮತಿ ಬಗ್ಗಿ ಕೇಳುತ್ತ ]

**ಸುಮತಿ:—** ಏನು ನೀರೇ ?

[ ನಿರ್ಮಲನು ಕಣ್ಣು ಮುಚ್ಚಿಕೊಂಡೇ ಸ್ವಲ್ಪ ಗೋಣು ಅಲುಗಿಸಿ ]

**ನಿರ್ಮಲ:—** ನೀರು........ಹೌದು .......ನೀರು.

[ ಸುಮತಿ ನೀರಿರುವವೇನೆಂದು ಗೋಣು ಹೊರಳಿಸಿ ಅತ್ತಿತ್ತ ನೋಡುತ್ತಿರಲು ನಿರ್ಮಲನು ಕಣ್ಣು ಮುಚ್ಚಿಯೇ ಸುಮತಿಯ ಮೈಮುಟ್ಟಿ ನೋಡುತ್ತ ]

ಸುಮತೀ !ऽऽ

[ ಸುಮತಿ ತಟ್ಟನೆ ಹಿಂದಿರುಗಿ ಆತುರದಿಂದ ನಿರ್ಮಲನ ಕೈಹಿಡಿದು ಪ್ರೀತಿಯಿಂದ ]

**ಸುಮತಿ:—** ಹೌದು ಸುಮತಿ. ಬಳಿಯಲ್ಲಿಯೇ ಇರುವೆ. ಮತ್ತೇನು?

[ ನಿರ್ಮಲನು ಕಣ್ಣುಗಳನ್ನು ಅರಿದೆರೆದು ಸುಮತಿಯನ್ನು ನೋಡುತ್ತ ]

**ನಿರ್ಮಲ:—** ನೀರು....ನೀರು ಕೊಡು ಸುಮತೀ !....ನೀರು.

[ ಸುಮತಿ ಉಸುರ್ಗರೆದು ದುಃಖದಿಂದ ಮುಖದಿರುವುತ್ತ ]

**ಸುಮತಿ:—** ನೀರು, ನೀರು. ಶಿವಶಿವಾ ! ಇಲ್ಲಿ ನೀರೇ ಇಲ್ಲಾ. ಇನ್ನೇನು ಮಾಡಲಿ ?

[ನಿರ್ಮಲನು ಕಿಂಚಿತ್ಕಾಲ ಸುಮತಿಯನ್ನು ನೋಡಿ ಅಮೇಲೆ ಎದ್ದು ಕುಳಿತು ಕೊಳ್ಳುತ್ತ]

ನಿರ್ಮಲ:— ನೀರು.....ನೀರಿಲ್ಲವೇ ?.....ನೋಡು ಸುಮತೀ..... ಗಂಟಲೊಣಗಿದೆ

[ ಒಮ್ಮೆಲೆ ಸಂಕಟಗೊಂಡು ತಲೆ ಹಿಡಿದುಕೊಳ್ಳುತ್ತ ]

ಹಾ! ತಲೆ—ತಲೆ ಬಿರಿಯಿತು....ಸಾಯುತ್ತೇನೆ ... ಸುಮತೀ !....ಅಯ್ಯೋ.

[ ನಿರ್ಮಲನು ಚೀರುತ್ತಿರಲು, ಸುಮತಿ ಗಾಬರಿಯಾಗಿ ಅವನನ್ನು ಹಿಡಿದು ತೊಡೆಯ ಮೇಲೆ ಮಲಗಿಸಿಕೊಂಡು ಮೇಲಕ್ಕೆ ನೋಡುತ್ತ ಕಳವಳದಿಂದ ]

**ಸುಮತಿ:**— ದೇವಾ ! ದೇವಾ !! ಏನೀ ಸಂಕಟಾ.

[ ಕೌಶಿಕ ದೀವಟಗೆಯ ಬೆಳಕಿನಲ್ಲಿ ಭಟರೊಂದಿಗೆ ಸೆರೆಮನೆಯೊಳಗೆ ಬರುವ. ಅವರನ್ನು ಕಂಡು ಸುಮತಿ ಆತುರತಾಪದಿಂದ ]

**ಸುಮತಿ:**— ದೊರೆಯೇ ! ದೊರೆಯೇ !! ತಪ್ಪಿಲ್ಲದೆ ಏಕೆ, ನಮ್ಮ-ನ್ನಿಷ್ಟೇಕೆ ಗೋಳಾಡಿಸುತ್ತಿರುವೇ ?

[ ಕೌಶಿಕ ತಿರಸ್ಕಾರದಿಂದ ಸುಮತಿಯನ್ನು ನೋಡುತ್ತ ಗೋಣು ಹಾಕಿ ]

**ಕೌಶಿಕ:**—ತಪ್ಪಿಲ್ಲ, ತಪ್ಪಿಲ್ಲದೆಲ್ಲಾದರೂ ಶಾಸನವಾಗುತಿಹುದೇನು?

[ ಸುಮತಿ ದೈನ್ಯದಿಂದ ]

**ಸುಮತಿ:**— ತಪ್ಪಿಲ್ಲ, ತಪ್ಪಿಲ್ಲ ದೊರೆಯೇ ! ಕನಸುಮನಸಿನಲ್ಲಾ-ದರೂ ನಿನ್ನಲ್ಲಿ ದ್ರೋಹವನ್ನೆಣಿಸಿದವರಲ್ಲ ನಾವು.

[ ನಿರ್ಮಲನು ಕಣ್ದೆರೆದು ಅರಸನನ್ನು ನೋಡಿ ಎದ್ದು ಕುಳಿತುಕೊಳ್ಳತೊಡ-ಗುವ. ಕೌಶಿಕ ಸಂತಾಪದಿಂದ ]

**ಕೌಶಿಕ:**— ದ್ರೋಹವನ್ನೆಣಿಸಲಿಲ್ಲವೆ ನೀವು ?

[ ನಿರ್ಮಲ ನರಳುತ್ತಲೇ ನಮ್ರತೆಯಿಂದ ತಲೆ ಬೊಗ್ಗಿಸುತ್ತ ದೀನಸ್ವರದಲ್ಲಿ ]

**ನಿರ್ಮಲ:**— ಇಲ್ಲಿಲ್ಲ ದೊರೆಯೇ !....ಎಂದೆಂದಿಗೂ ನಿನ್ನಲ್ಲಿ ಭಕ್ತಿ ....ಭಕ್ತಿಯುಳ್ಳವರು ನಾವು. ದ್ರೋಹವನ್ನೆಣಿಸುವವರಲ್ಲ.

[ ನಿರ್ಮಲನು ನೋವಿನಿಂದ ಸಂಕಟಗೊಂಡು ]

ಹಾಽಽ ಸುಮತೀ !....

[ ಕಣ್ಣು ಮುಚ್ಚಿ ಸುಮತಿಯು ಮೈಮೇಲೆ ಭಾರಹಾಕಿ ಬೀಳುವ ]

**ಕೌಶಿಕ:**— ದ್ರೋಹವನ್ನೆಣಿಸುವವರಲ್ಲವಂತೆ. ರಾಜಾಜ್ಞೆಯನು ಪಡೆದಾ ರಾಜದೂತರು ನಿಮ್ಮೆಡೆಗೆ—ನಿಮ್ಮೆಡೆಗೆ ಕನ್ಯಾರ್ಥಿಯಾಗಿ ಬಂದಿರ ಲವರ ಮನ್ನಿಸದೆ, ರಾಜಾಜ್ಞೆಯನು ಧಿಃಕ್ಕರಿಸಲಿಲ್ಲವೆ ನೀವು ?

[ ಮಹಾದೇವಿ ಭಟರೊಂದಿಗೆ ಸೆರೆಮನೆಯಲ್ಲಿ ಕಾಲಿಡುತ್ತ ]

**ಮಹಾದೇವಿ:**— ಅಲ್ಲಲ್ಲ, ರಾಜಾಜ್ಞೆಯನು ಧಿಃಕ್ಕರಿಸಿದವರವರಲ್ಲ. ನಾನರಸೇ ನಾನು. ಎನ್ನ ದಂಡಿಸದೆ ತಪ್ಪಿಲ್ಲದವರನೇಕೆ........

[ ಮಹಾದೇವಿ, ನಿರ್ಮಲ-ಸುಮತಿಯರ ಕಡೆಗೆ ನೋಡಿ ಕಾತರಗೊಂಡು ]

ಹಾ....ಹಾ ತಂದೆ.

[ ಧಾವಿಸಿ ನಿರ್ಮಲನ ಹತ್ತರ ಹೋಗಿ ಅವನ ಮೈ ಮುಟ್ಟುತ್ತ ]

ಇದೆಂಥ, ಇದೆಂಥ ದುರ್ದೆಶೆ ನಿನಗೆ ?

[ ನಿರ್ಮಲನು ಮೆಲ್ಲನೆ ಕಣ್ದೆಗೆದು ಮಹಾದೇವಿಯನ್ನು ನೋಡುತ್ತ ]

**ನಿರ್ಮಲ:**— ಯಾರು ! ....ಮಹಾದೇವಿ ? ....ಮಗೂ....ಮಗೂ ....ಮಗೂ .......

[ ಎಂದವಳ ಮೈಮೇಲೆ ಕೈಯ್ಯಾಡಿಸುತ್ತ ಆಯಾಸದಿಂದ ಕಣ್ಣು ಮುಚ್ಚುವ. ಮಹಾದೇವಿ ಕಳವಳದಿಂದ ಹಿಂದಿರುಗಿ ]

**ಮಹಾದೇವಿ:**—ಅರಸೇ ! ಅರಸೇ !! ಈ ದೈನ್ಯದುಃಖವ ನೋಡಿ, ಕರಗದಿಹ ನಿನ್ನೆದೆಯು ತಾನದೇನು ಕಲ್ಲು—ಕಲ್ಲೆದೆಯೇ ?

[ ಕೌಶಿಕ ಸ್ಮಿತಗೈದು ವ್ಯಂಗ್ಯವಾಗಿ ]

**ಕೌಶಿಕ:**—ಅಹುದಹುದು, ಎನ್ನೆದೆಯು ಕಲ್ಲೆದೆಯು. ಮಹಾದೇವಿ ! ನಿನಗಾಗಿ ಹಂಬಲಿಸಿ ಹುಚ್ಚಾಗಿ, ಮರುಗಿ ಕೊರಗುತಿರುವೆನ್ನನು ನೋಡಿ, ಕರಗದಿಹ ನಿನ್ನೆದೆಯು ತಾಬಲು ಮಿದುವಲ್ಲವೇ ?

[ ಮಹಾದೇವಿ ಎದ್ದು ಅರಸನ ಹತ್ತಿರ ಬಂದು ದೈನ್ಯದಿಂದ ]

**ಮಹಾದೇವಿ:**— ನಿರ್ದಯ, ನೀನಿಂತು ನಿರ್ದಯನಾಗದಿರರಸೇ ! ಅಪರಾಧಿಯಾದೆನ್ನ ದಂಡಿಸದೆ, ನಿರಪರಾಧಿಗಳನಿಂತು ಬಳಲಿಸುವದುಚಿ-ತವೇ ನಿನಗೆ ? ಬೇಡರಸೇ ಬಿಡಿಸು, ಬಿಡಿಸಿವರ ಬಂಧನವ. ಬಿಡಿಸೆನ್ನ ದಂಡಿಸು. ನಿನ್ನ ಮನಬಂದ ಪರಿಯಲೆನ್ನನು ದಂಡಿಸು. ಸಿದ್ಧಳಾಗಿಹೆನು.

[ ಅರಸು ಮರುಮಾತಾಡದೆ ಅಲಕ್ಷ್ಯವಾಗಿ ನಗುತ್ತ ಮುಖದಿರುವಲು, ಮಹಾದೇವಿ ನೊಂದು ದೈನ್ಯದಿಂದ ]

**ಮಹಾದೇವಿ:**—ಬಿಡಿಸಲಾರಿಯಾ ? ನೀನಿವರ ಬಂಧನವ ಬಿಡಿಸಲಾರಿಯೇನರಸೇ ?

[ ಕೌಶಿಕ ಹೊರಳಿ ನಿಂತು ಮಹಾದೇವಿಯನ್ನು ನೋಡುತ್ತ ನಿರ್ಧಾರದಿಂದ ]

**ಕೌಶಿಕ:**—ಬಿಡಿಸುವೆ, ಬಿಡಿಸುವೆ. ನೀನೆನ್ನೊಡನೆ ಮದುವೆಯಾಗಲೊಪ್ಪಿದರೆ ಮಹಾದೇವಿ ! ನಾನಿವರ ಬಂಧನವ ಬಿಡಿಸುವೆನು. ಒಪ್ಪದಿರೆ —ನೀನೆನ್ನೊಡನೆ ಮದುವೆಯಾಗಲೊಪ್ಪದಿರಲಿವರ........

[ ಮಹಾದೇವಿ ಗಾಬರಿಯಾಗಿ ನಡುವೇ ]

**ಮಹಾದೇವಿ:**— ಮದುವೆಯಾಗಲೊಪ್ಪದಿರೆ, ಒಪ್ಪದಿರಲು ಇವರನು ಏನು—ಏನು ಮಾಡುವೆ ?

[ ಕೌಶಿಕ ಸಂತಾಪದಿಂದ ಗೋಣು ಹಾಕುತ್ತ ]

**ಕೌಶಿಕ:**— ಏನು ಮಾಡುವೆ ! ನೀನೆನ್ನೊಡನೆ ಮದುವೆಯಾಗಲೊಪ್ಪದಿರಲೇನು ಮಾಡುವೆನೇ ?

[ ಕೌಶಿಕ ಗೋಡೆಯ ಹತ್ತರ ಹೋಗಿ ಅಲ್ಲಿದ್ದ ಕೀಲವನ್ನು ತಿರುವುತ್ತ ]

ನೋಡು, ನೋಡಿಲ್ಲಿ. ಎನ್ನ ಕೋಪಕೀಡಾದವರ ಪಾಡು ಏನಾಗುತಿಹುದೆಂಬುದನು, ಮಹಾದೇವೀ ! ಚನ್ನಾಗಿ ಕಣ್ದೆಗೆದು ನೋಡಿಲ್ಲಿ.

[ ಸೆರೆಮನೆಯ ಗೋಡೆಯು ಇಬ್ಭಾಗವಾಗಿ ಸರಿದು ಹೋಗುವದು. ಒಳಗೆ ವಿಸ್ತಾರವೂ, ಭಯಾನಕವೂ ಆದ ಸೆರೆಮನೆಯ ಬೇರೊಂದು ಭಾಗವು ಕಾಣುವದು. ಅಲ್ಲಿ ಕೆಲವರ ಕೈಕಾಲು ಕಟ್ಟಿ ಗೋಡೆಗೆ ನಿಲ್ಲಿಸಿರುವಂತೆಯೂ, ಮತ್ತೆ ಕೆಲವರನ್ನು ಕೋಳಹಾಕಿ ನೆಲಕ್ಕುರುಳಿಸಿರುವಂತೆಯೂ, ಇನ್ನುಳಿದವರನ್ನು ತೂಗಬಿಟ್ಟಿರುವಂತೆಯೂ, ದೀವಟಿಗೆಯ ಬೆಳಕಿನಲ್ಲಿ ಮುಸುಕು ಮುಸುಕಾಗಿ ಕಾಣುವದು. ಅಲ್ಲೆಲ್ಲಾ "ಹಾ, ಹಾ" ಎಂಬ ಆರ್ತನಾದವು ತುಂಬಿ ಹೋಗಿದೆ. ಮಹಾದೇವಿ ಆ ದೃಶ್ಯ ನೋಡಿ ಭೀತಿಯಿಂದ ಹೌಹಾರಿ ಹೋಗುವಳು. ]

ನೋಡಿದಿಯಾ? ಏನು ಮಾಡುವೆನೆಂಬುದನು ನೋಡಿದಿಯಾ? ನಿನ್ನ ತಂದೆ ತಾಯ್ಗಳುಳಿವುದಕೆ ಅಳಿವುದಕೆ ಮಹಾದೇವಿ ! ನಿನ್ನದೊಂದೇ ಒಂದು ಮಾತು. ಹೇಳು, ಹೇಳೀಗ. ನೀನು ಎನ್ನೊಡನೆ ಮದುವೆಯಾಗಲೊಪ್ಪುವಿಯಾ ?

[ ಮಹಾದೇವಿ ದಿಙ್ಮೂಢಳಂತಾಗಿ ಭೀತಿಯಿಂದ ]

**ಮಹಾದೇವಿ:—** ಅರಸೇ ! ಅರಸೇ !!

( ಇದನ್ನೆಲ್ಲ ನೋಡಿ, ಸುಮತಿ ಭೀತಿಯಿಂದ ಭ್ರಮೆಗೊಂಡು )

**ಸುಮತಿ:—** ಹಾ ! ಹಾ ! ಮಹಾದೇವಿ !

(ಸುಮತಿ ಕಣ್ಮುಚ್ಚಿ ನಿರ್ಮಲನ ಮೈಮೇಲೆ ಬೀಳಲು, ಮಹಾದೇವಿ ಸುಮತಿಯನ್ನು ನೋಡಿ ಸಂಕಟದಿಂದ)

**ಮಹಾದೇವಿ:—** ಶಿವಶಿವ !

( ಎಂದು ಧಾವಿಸಿ ಹೋಗಿ ಸುಮತಿಯನ್ನು ಹಿಡಿದೆಬ್ಬಿಸಿ ಗಾಳಿ ಹಾಕುತ್ತಿರಲು, ಜಗದಾರಾಧ್ಯ ಹಾಡುತ್ತ ಹೋಗುವ ಧ್ವನಿ ಕೇಳಿಸುವದು. )

ರೂಹಿಲ್ಲದವಗೆ ಒಲಿದ ಮೇಲೆ ತನುವಿನ ಹಂಗೇಕೆ । ಮನವಿಲ್ಲದವಗೆ ಮೆಚ್ಚಿದ ಮೇಲೆ ಅಭಿಮಾನದ ಹಂಗೇಕೆ । ದಿಗಂಬರನ ಅಪ್ಪಿದ ಮೇಲೆ ಕೌಪೀನದ ಹಂಗೇಕೆ । ಅಂಗಲಿಂಗಗಳೊಂದಾದ ಮೇಲೆ ಮಾಯದ ಹಂಗೇಕೆ । ಮನವೆ ಮಾಯದ ಹಂಗೇಕೆ ।

( ಪದವನ್ನು ಕೇಳಕೇಳುತ್ತ ಮಹಾದೇವಿಯ ಕಳವಳಗೊಂಡ ಮನವು ಶಾಂತವಾಗಿ ಅವಳ ಮುಖವು ಗಂಭೀರವಾಗುವದು. ಅರಸು ಆತುರದಿಂದ)

**ಕೌಶಿಕ:—** ಮೌನಳಾಗಿಹೆ ಏಕೆ ? ಮಾತಾಡು, ಮಾತಾಡು ಮಹಾದೇವಿ ! ಎನ್ನೊಡನೆ ಮದುವೆಯಾಗಲೊಪ್ಪುವಿಯೊ ಇಲ್ಲವೋ ಹೇಳೀಗ.

( ಮಹಾದೇವಿ ಅರಸನನ್ನು ನೋಡುತ್ತ ಗಂಭೀರಳಾಗಿ )

**ಮಹಾದೇವಿ:—** ನಿನ್ನೀ ಕ್ರೌರ್ಯ, ಕ್ರೌರ್ಯಕಂಜಿ ನಾನೊಪ್ಪಿದೆನಾದರೆ ಅರಸೇ ! ಪ್ರೇಮವಿಲ್ಲದೀ ಸ್ತ್ರೀದೇಹದೊಡನೆ ಮದುವೆಯಾಗೇನು, ಏನು ಸುಖಪಡುವೆ ?

**ಕೌಶಿಕ:—** ಬೇಡಬೇಡಬಲೇ ! ಪ್ರೇಮಗೀಮಗಳೆನಗೆ ಬೇಡೀಗ. ನಿನ್ನೀ ಸೌಂದರ್ಯ, ಸ್ವರ್ಗೀಯ ಸೌಂದರ್ಯವನು ಪೊಂದುವ ಸುಖವಷ್ಟೆ ಸಾಕೆನಗೆ.

**ಮಹಾದೇವಿ:—** ಸೌಂದರ್ಯ, ಸೌಂದರ್ಯವೆಂದರೇನೆಂಬುದನೆ ಮೊದಲು ನೀನು ಅರಿತಿಲ್ಲ ಅರಸೇ! ಸೌಂದರ್ಯವೆಂದರದು ವಸ್ತು ತಾನಲ್ಲ. ಮನದಲಿ ಉದಿಸುವ ಭಾವ. ಅದರ ಹೆಸರೇ ಪ್ರೇಮ.

**ಕೌಶಿಕ:**— ಸೌಂದರ್ಯ-ಪ್ರೇಮಗಳೆಂದರೆ ಒಂದೆಂಬ ಮೋಸದ ಮಾತಿನಿಂದಿನ್ನು ಮರುಳಾಗಲಾರೆನು ನಾನು. ಮಹಾದೇವೀ ! ನಿನ್ನೀ ಸುಂದರ ದೇಹವನಾದರೂ ಎನಗೊಪ್ಪಿಸುವಿಯೋ ಇಲ್ಲವೋ ಹೇಳೀಗ.

(ಅಂಜು ಮಹಾದೇವಿಯತ್ತ ಬರುತ್ತಿರಲು ಮಹಾದೇವಿ ತಿರಸ್ಕಾರದಿಂದ ನಗುತ್ತ)

**ಮಹಾದೇವಿ:**— ಸುಂದರ ದೇಹ. ಎಲುವಿನ ಗೂಡಿದಕೆ ಸುಂದರ ದೇಹವೆಂದಾಡುವರೆ ಮೂಢಾ ! ನೋಡು, ನೋಡು. ಈ ಸುಂದರ ದೇಹ-ದಲ್ಲೇನಿಹುದೊ ನೋಡಿಲ್ಲಿ.

**ಅಮೇಧ್ಯದ ಮಡಿಕೆ । ಮೂತ್ರದ ಕುಡಿಕೆ । ಎಲುವಿನ ತಡಿಕೆ । ಕೀವಿನ ಹಡಿಕೆ ॥ ಸುಡಲೀ ದೇಹವ । ಒಡಲುವಿಡಿದು ಕೆಡದಿರು । ಚೆನ್ನಮಲ್ಲಿಕಾರ್ಜುನನರಿ ಮರುಳೇ ॥**

( ಮಹಾದೇವಿ ಸೀರೆಯನ್ನು ಸೆಳೆದು ಬಿಡಲು, ಅವಳ ಲಾವಣ್ಯಮಯವಾದ ದೇಹದ ಬದಲಾಗಿ ಕಿಂಕಿರಿಯೊಂದು ಹಲ್ಕಿರಿಯುವ ಎಲುವಿನ ಹಂದರವು ಮಾತ್ರ ಕಾಣುವದು. ಕೌಶಿಕ ಮೊದಲ್ಗೊಂಡು ಎಲ್ಲರೂ ಭೀತಿಯಿಂದ ಕಣ್ಮುಚ್ಚುವರು. ಅಂಜು ಪಶ್ಚಾತ್ತಾಪದಿಂದ )

**ಕೌಶಿಕ:**— ತಾಯಿ !........ತಾಯಿ !........ತಾಯಿ !

[ ತೆರೆ ಬೀಳುವದು ]

## ಪ್ರವೇಶ ೪

ಸ್ಥಳ—ಅರಣ್ಯ ಮಾರ್ಗ. ಸಮಯ—ಮಧ್ಯರಾತ್ರಿ.

[ ಚಂದ್ರನು ಆಕಾಶಮಧ್ಯದಲ್ಲಿ ಹೊಳೆಯುತ್ತಲಿದ್ದಾನೆ. ಆಕಾಶವು ನಿರಭ್ರ. ಹಿಟ್ಟು ಚಲ್ಲಿದ ಹಾಗೆ ಬೆಳದಿಂಗಳು ಬಿದ್ದಿದೆ. ನಿರ್ಮಾನುಷ, ನೀರವವಾದಾ ಬೀದಿಯಲ್ಲಿ ಮಹಾದೇವಿ ಬಟ್ಟೆಯನ್ನುಳಿದು, ನಗ್ನದೇಹಿಯಾಗಿ ಹೊರಟಿರುವಳು. ಗಾಳಿಯು ಅವಳಾ ನಗ್ನದೇಹವನ್ನು, ಉದ್ದಾದ ತಲೆಗೂದಲು ಹಾರಿಸಿ ಮರೆ ಮಾಡಿದೆ. ದೂರದಲ್ಲಿ ಕೌಶಿಕ ಅವಳ ಬೆಂಗೊಂಡು ಹೋಗುತ್ತಿರುವ. ]

**ಮಹಾದೇವಿ:**—

**ಬಿಟ್ಟೆನೆಂದರೆ ಬಿಡದೀ ಮಾಯೆ । ಬಿಡದಿದ್ದರೆ ಬೆಂಬತ್ತುದು ಮಾಯೆ । ಯೋಗಿಗೆ ಯೋಗಿಣಿಯಾಯಿತು ಮಾಯೆ । ಸವಣಗೆ ಸವಣಿಯಾಯಿತು ಮಾಯೆ । ಯತಿಗೆ ಪರಾಕಿಯಾಯಿತು ಮಾಯೆ । ನಿನ್ನೀ ಮಾಯೆಗೆ ನಾನಂಜುವಳಲ್ಲ । ಚೆನ್ನಮಲ್ಲಿಕಾರ್ಜುನಾ, ನಿಮ್ಮಾಣೆ ನಿಮ್ಮಾಣೆ ದೇವಾ ।**

**ಕೌಶಿಕ:— ತಾಯೆ ! ತಾಯೆ ! ತಾಯೆ !**

( ಜಗದಾರಾಧ್ಯ ಬರುತ್ತ )

**ಜಗದಾರಾಧ್ಯ:— ಧನ್ಯ, ಧನ್ಯ !**

**ಆದಿ ಇಲ್ಲ, ಅನಾದಿ ಇಲ್ಲ ।.ನಾಮವಿಲ್ಲ, ಸೀಮೆ ಇಲ್ಲ । ನಿಜಶಕ್ತಿ ಚಿಚ್ಛಕ್ತಿಯಾಯಿತ್ತು ನೋಡಾ । ಅಂತರಂಗದ ಪ್ರಭೆ, ಬಹಿರಂಗದಲಿ ತಾನೆತಾನಾಗಿ ತೊಳಗುತಿದೆ । ಗುಹೇಶ್ವರಲಿಂಗದಲಿ ಸಂದಿಲ್ಲದಿಹ ತಾಯೆ ಮಹಾದೇವಿ, ನಿನ್ನಯ ಶ್ರೀಪಾದಗಳಿಗೆ ನಮೋ ನಮೋ ಎನುತಿರ್ಪೆ ।**

[ ಎಂದು ಕೈಮುಗಿದು ನಮಸ್ಕರಿಸುವ. ]

[ ಮುಗಿದುದು ]

**ಓಂ ಶಿವಾರ್ಪಣಮಸ್ತು.**